ಯುಗಾದಿ ಸಂಚಿಕೆ

# ಅಪರಂಜಿ

ಏಪ್ರಿಲ್
1990

ತಿಳಿನಗೆಯ ಕಾರಂಜಿ



- ಆನಂದ್
- ಸೂರಿ
- ಶಿವಯ್ಯ
- ಶೀನೂ
- ಶಿವು
- ಹಾ.ವ್ಯ. ಸೂರಿ
- ನಾಗರಾಜ್
- ಜಂಬಾ
- ಕೇಫ
- ಅ. ರಾ. ಸೆ.
- ಶಾಂತಾ ರಘು
- ಚಂದ್ರು

ಬಿಡಿ ಪ್ರತಿ : 2 ರೂ. 50 ಪೈ.




(ತಿಳಿನಗೆಯ ಕಾರಂಜಿ)

ಸಂಪುಟ ೭ | ಏಪ್ರಿಲ್ ೧೯೯೦ | ಸಂಚಿಕೆ ೭

ಇಂದು ಯುಗಾದಿ. ಬರಲಿರುವ ಪ್ರಮೋದೂತ ಸಂವತ್ಸರ, ನಮ್ಮ ಓದುಗರು, ಲೇಖಕ, ಲೇಖಕಿಯರು, ಜಾಹಿರಾತುದಾರರೆಲ್ಲರಿಗೂ ಬೇವಿಗಿಂತ ಬೆಲ್ಲವನ್ನೇ ಹೆಚ್ಚು ತರಲಿ ಎಂದು ಅಪರಂಜಿ ತಲೆಬಾಗಿ ಪ್ರಾರ್ಥಿಸುತ್ತಾಳೆ. ಅಂತೆಯೇ ಆತಂಕವಾದಿಗಳಿಂದ, ದೇಶದ ಉತ್ತರ ಮತ್ತು ಪೂರ್ವ ಭಾಗಗಳಲ್ಲಿ ನಡೆಯುತ್ತಿರುವ ಹತ್ಯಾಕಾಂಡ ಈ ಹೊಸ ಸಂವತ್ಸರದಲ್ಲಾದರೂ ಕೊನೆಗಾಣುವಂತಾಗಲಿ ಎಂದು ಹಾರೈಸುತ್ತಾಳೆ.


| | | |
|---|---|---|
| ಗೌರವ ಸಲಹೆಗಾರರು :<br>ಶ್ರೀ ಅ. ರಾ. ಸೇ.<br>ಶ್ರೀ ಶೇಷಗಿರಿ<br><br>ಸಂಪಾದಕ :<br>**ಶಿವಕುಮಾರ್** | ಚಂದಾ ವಿವರ:<br>ಬಿಡಿ ಪ್ರತಿ :<br>2 ರೂ. 50 ಪೈ.<br>ವಾರ್ಷಿಕ ಚಂದಾ :<br>25 ರೂ.<br>ಆಜೀವ ಚಂದಾ :<br>250 ರೂ. | ವಿಳಾಸ :<br>ಅಪರಂಜಿ ಕಾರ್ಯಾಲಯ,<br>36, 6ನೆಯ ಮುಖ್ಯ ರಸ್ತೆ<br>ಮಲ್ಲೇಶ್ವರಂ<br>ಬೆಂಗಳೂರು560003<br>ಕೆಲಸದ ವೇಳೆ :<br>ಬೆಳಗ್ಗೆ 8ರಿಂದ 10ರವರೆಗೆ ಮಾತ್ರ |

ಈ ಸಂಚಿಕೆಯಲ್ಲಿ



ವ್ಯಂಗ್ಯ ಚಿತ್ರಗಳು : ಚಂದ್ರು

ಮುದ್ರಣ : ಇಂಪ್ರೆಷನ್ಸ್, ಮಲ್ಲೇಶ್ವರಂ, ಬೆಂಗಳೂರು,
ದೂರವಾಣಿ :

# ಅಪರಂಜಿ

## (ತಿಳಿನಗೆಯ ಕಾರಂಜಿ)

ಸಂಪುಟ-೭ ಏಪ್ರಿಲ್-೧೯೯೦ ಯುಗಾದಿ ವಿಶೇಷಾಂಕ ಸಂಚಿಕೆ-೫

ಎಲೆ ಮೈತ್ರೇಯಿ ಇದೇ ಅಮೃತತ್ವ.

—ಬೃಹದಾರಣ್ಯಕ

ಎಲ್ಲವೂ ಆತ್ಮವೇ ಆದಾಗ, ಇದಲ್ಲ ಇದಲ್ಲ ಎಂದು ನಿಶ್ಚಯಿಸಿ ದ್ವೈತ ದೃಷ್ಟಿಯನ್ನು ಕಳೆದುಕೊಂಡಾಗ, ಎಲ್ಲವನ್ನೂ ಅರಿಯುವ ಆತ್ಮನನ್ನು ಪಡೆದು ಎಲ್ಲ ಹಿಡಿತಗಳನ್ನು, ಸವೆತಗಳನ್ನು, ಸಂಗಗಳನ್ನು, ವ್ಯಥೆಗಳನ್ನು, ಹಿಂಸೆಗಳನ್ನು ಕಳೆದು ಕೊಂಡು, ಅಮೃತನಾಗುತ್ತಾನೆ.

ಎಲ್ಲಿ ದ್ವೈತವಿದೆಯೋ ಅಲ್ಲಿ ಭಯ, ದ್ವೇಷ, ಕುಹಕ ಮತ್ಸರಗಳು ಬೀಡು ಬಿಟ್ಟಿರುತ್ತವೆ.

ವರ್ತಮಾನದಲ್ಲೂ ಅಷ್ಟೇ. ಹಲವು ಊಹೆಗೂ ನಿಲುಕದ ಬದಲಾವಣೆಗಳಾಗಿ ಹೋಗಿವೆ. ಏಕತೆಯಲ್ಲಿ ಭಿನ್ನತೆಯ ವಿಷಬೀಜವನ್ನು ಬಿತ್ತಲಾಗಿದೆ. ಸ್ನೇಹದಲ್ಲಿ ದ್ವೇಷದ ಕಿಡಿ ಹಾರುತ್ತಿದೆ. ನಮ್ಮಿಂದಲೇ ನಿಮ್ಮ ಉದ್ಧಾರವಾಗುವುದೆಂದವರ ಉದ್ಧಾರವಾಗುವುದು ಬಲು ಕಷ್ಟ. ರಾಜಕೀಯದಲ್ಲಿ ಸಾಹಿತ್ಯದಲ್ಲಿ ದೈನಂದಿನ ಜೀವನದಲ್ಲಿ ಕುಹಕಿಗಳೇ ಮೆರೆಯುತ್ತಿದ್ದಾರೆ.

ಆದುದರಿಂದ ಶ್ರೀ ಸಾಮಾನ್ಯನು ಹೀಗೆಂದು ನಿರ್ಧರಿಸಬೇಕು. "ಇವರನ್ನು ಉದ್ಧರಿಸಿ, ನಾನು ಪತಿತನಾಗಿದ್ದೇನೆ. ಇನ್ನು ಮೇಲೆ ಇವರ ಸಹಸ್ರ ಅಪಸ್ವರಗಳಿಗೆ ಕಿವುಡಾಗುತ್ತೇನೆ. ನನ್ನ ಹೆಸರಿನಲ್ಲಿ ಹಣ ಮಾಡಿಕೊಂಡು ದುರಾಚಾರ ಮಾಡುತ್ತಾ ಉತ್ತಮ ಉಪದೇಶ ಕೊಡುತ್ತಿರುವ ಈ ಬೆದರುಗೊಂಬೆಗಳಿಗೆ ಧಿಕ್ಕಾರ, ಇನ್ನು ನನ್ನ ಪಾಡು ನನಗೆ"

ಯಾವುದಾದರೂ ನಿರ್ಧಾರ ಮಾಡಲು ಮೈಯಲ್ಲಿ ಮನಸ್ಸಿನಲ್ಲಿ ಶಕ್ತಿ ಇರಬೇಕು. ಬಂದಿರುವ ಹೊಸ ವರುಷದಲ್ಲಿ ಅಂತಹ ಶಕ್ತಿ ಬರಲಿ ಎಂದು ಹಾರೈಸಿ, ನಗೋಣ.



—ಪ್ರಕಾಶ್

ಏರ್‌ಬಸ್ ದುರಂತಕ್ಕೆ ಈ ವಿಮಾನಗಳು ಫ್ರಾನ್ಸಿನ 'ಟೂ ಲೂಸ್' ನಲ್ಲಿ ತಯಾರಾಗಿದ್ದೇ ಕಾರಣವಿರಬಹುದು !

* * * *

ಭಾರತಕ್ಕೆ ಸೋಲು ; ಆಟಗಾರರ ಮೇಲೆ ಕಿಡಿ ಕಾರಿದ ಬೇಡಿ.

—ಸಂದ್ದಿ

ಬೇಡಿ ! ಬೇಡಿ !!

* * * *

ಚಿತ್ರದುರ್ಗದ ವಿದ್ಯಾಪೀಠಕ್ಕೆ ಇನ್ನೊಂದು ಮೆಡಿಕಲ್ ಕಾಲೇಜ್.

—ಸುದ್ದಿ

ದೇವ ದೇವಾ, ಇನ್ನೊಂದು ಕಾಲೇಜೇ?

* * * *

ಫ್ಲೋನ್ ಬಳಕೆದಾರರ ದೂರು ವಿಚಾರಣೆ.

—ಪತ್ರಿಕೆ

ಗೋರ್ಕಲ್ಲ ಮೇಲೆ ಮಳೆ ಸುರಿದಂತೆ !

*　　*　　*　　*

ಕೋರಮಂಗಲದ ಬಡಾವಣೆ ಮತದಾರರ ಪಟ್ಟಿಯಲ್ಲಿ ಬೂಟಾ ಸಿಂಗ್.

—ಪತ್ರಿಕೆ

ಕಾಂಗ್ರೆಯ ಬೂಟಾಟಿಕೆ ನಿಲ್ಲಲಿಲ್ಲ !

*　　*　　*　　*

"ಬೆಂಗಳೂರಿನಲ್ಲಿ ದೊರೆಯುವ ಅಂತಾರಾಷ್ಟ್ರೀಯ ಮಟ್ಟದ ಸರ್ಜಿಕಲ್ ಸೌಲಭ್ಯಗಳು"

—ಹೈಟೆಕ್ ಆಸ್ಪತ್ರೆ ಜಾಹೀರಾತು

ಅಂತಾರಾ ಅಂದರೆ ಪಂಚತಾರಾ ಬೆಲೆಗಳು ಅಂತಲೋ?

*　　*　　*　　*

ನಗರದಲ್ಲಿ ಹೊಸ ಹೈಟೆಕ್ ಆಸ್ಪತ್ರೆ.

—ಸುದ್ದಿ

ಅದು ಕನ್ನಿಂಗ್‌ಹ್ಯಾಂ ರಸ್ತೆಯಲ್ಲಿರುವುದು ಕಾಕತಾಳೀಯ ಅಷ್ಟೆ !

*　　*　　*　　*

ನಾನು ಕಳೆದ 20 ವರ್ಷಗಳಿಂದ ಹೇಳುತ್ತಿದ್ದುದನ್ನು ಈಗ ಮಾಡಿ ತೋರಿಸುವೆ.

—ಶ್ರೀ ಹೆಗಡೆ

ಅದೇ ನಮಗೂ ಭಯ !

*　　*　　*　　*

# ಇಂಗ್ಲಿಷ್ ಪಂಡಿತ

**—ಸೂರಿ**

---

ಸಾಧಾರಣವಾಗಿ ಪರಿಸ್ಥಿತೀಲಿ ಅಂದ್ರೆ ನನ್ನ ಅಕ್ಕನ ಮಗಳು ಸುಜಾತಾ ಹೆಚ್ಚಿಗೆ ಮಾತಾಡೋಳೇ ಅಲ್ಲ. ಏನು ಹೇಳಬೇಕೋ ಅದನ್ನ ಅಚ್ಚುಕಟ್ಟಾಗಿ ನಾಲಕ್ಕು ಮಾತ್ನಲ್ಲಿ ಮುಗಿಸಿದಂತೆ ಮಾಡಿಬಿಡ್ತಾಳೆ. ಆದ್ರೆ ಅವತ್ತು ಭಾನುವಾರ ಮಾತ್ರ ಆ ರೀತಿ ಆಗಲಿಲ್ಲ. ಹನ್ನೊಂದು ಘಂಟೇಗೆಲ್ಲಾ ಧಡಾಭಡಾ ಅಂತ ಬೆಂಗಳೂರಿಂದ ಟ್ಯಾಕ್ಸಿ ಮಾಡಿಕೊಂಡು ಬಂದವಳು ಒಂದು ಘಂಟೆಯಾಗ್ತಾ ಬಂದಿದ್ರೂ ಮಾತು ಮುಗಿಸಲೇ ಒಲ್ಲಳು—ಹೇಳಿದ್ದೇ ಹೇಳ್ತಾ ಇದಳೆ; ಜತೆಗೆ ಈಗಲೋ ಆಗಲೋ ಗೊಳೋ ಅಂತ ಅಳೋಕ್ಕೂ ಶುರು ಮಾಡೋ ಥರಾ ಕಾಣ್ತಾ ಇದೆ.

ಇದಕ್ಕೆ ಈಗಲೇ ಬ್ರೇಕ್ ಹಾಕದೇ ಹೋದರೆ, ರಜಾ ದಿನವೆಲ್ಲ ಇದೇ ಕತೆಯಾಗುತ್ತೆ ಅಂದುಕೊಂಡವನು, ನಾನೇ ಅವಳನ್ನ interrupt ಮಾಡಿದೆ :

"ಅಷ್ಟು ಬಿಡಮ್ಮಾ ಸುಜಾತಾ....ನೀನು ಇಷ್ಟು ಹೊತ್ತೂ ಹೇಳಿದ್ದನ್ನ ಒಂದು ನಾಲಕ್ಕು ಮಾತ್ನಲ್ಲಿ paraphrase ಮಾಡೋದಾದ್ರೆ....ಮೊನ್ನೆಯಿಂದ ನಿಮ್ಮ ಮನೇಲಿ ಮಗೂನ ಎತ್ಕೊಳ್ತಿದ್ದ ಹುಡುಗೀ ಬರ್ತಾ ಇಲ್ಲ. ನಿಂಗೆ ನಿನ್ನ ಗಂಡನಿಗೆ ರಜಗಳು ಮುಗಿದುಹೋಗಿರೋದರಿಂದ ಇಬ್ಬರಲ್ಲಿ ಒಬ್ಬರು ಯಾರಾದೂ ರಜಾ ಹಾಕಿ ಮನೇಲಿ ಇರ್ತೀವ ಅನ್ನೋದಕ್ಕೂ ಆಗ್ತಾ ಇಲ್ಲ....ನಿಮ್ಮ bank officers colonyನಲ್ಲಿ ಆಸುಪಾಸಿನಲ್ಲಿ ನಮ್ಮ ಭಾಷೆ ಮಾತಾಡೋರು ಅನ್ನೋರೂ ಯಾರೂ ಇಲ್ಲ....ಸಾಲದ್ದಕ್ಕೆ ಬೆಂಗಳೂರಿನಲ್ಲಿ ಈ ಎರಡು ಮೂರು ತಿಂಗಳಿಂದ ಮಕ್ಕಳನ್ನ ಕದ್ದುಕೊಂಡು ಹೋಗೋ ಗುಂಪುಗಳು active ಆಗಿವೆ ಅಂತ scare ಕೂಡ ಶುರುವಾಗಿದೆ. ಹಾಗಾಗಿ ಕಾಡೋರ ಮನೆ ಮಕ್ಕಳ ಜವಾಬ್ದಾರಿ ಆಜೂಬಾಜಿನ ಮನೆಯವರಿಗೆ ಯಾರಿಗೂ ಬೇಡ....ಏನು ಮಾಡಬೇಕೂ ಅನ್ನೋದು ತೋಚದೆ ಕಡೆಗೆ ನನ್ನ ಹುಡುಕ್ಕೊಂಡು ಚನ್ನಪಟ್ಣಕ್ಕೆ ಬಂದಿದ್ದೀಯಾ.... ಅದೇನೋ ಹೇಳ್ತಾರಲ್ಲ "ಕಾರ್ಯವಾಸಿ ಕತ್ತೆ ಕಾಲೂ" ಅಂತ ಆ ರೀತಿ....

"ಹಯ್ಯೋ, ಕಾಲು ಕಟ್ಕೋತೀನಿ ಅಂದ್ರೂ ಸಿಗಬೇಕಲ್ಲಪ್ಪ ಬೆಂಗಳೂರಿನಲ್ಲಿ ಕತ್ತೆಗಳು ಈಗ? ...ಅದಕ್ಕೇ ಅಲ್ಲವೇ nearest substitute ಅಂತ ನಿನ್ನ ಹತ್ತಿರ ಬಂದಿರೋದು...."

"ನಿನ್ನ ತಲೆಹರಟೆ ಆಮೇಲೆ ಮಾಡೋವಿಯಂತೆ.... ಬೆಂಗಳೂರಲ್ಲಿ ಏನು. ಚನ್ನಪಟ್ಣದಲ್ಲೂ ಕೂಡ ಅಷ್ಟೆ ಈಗ....ಮನೇ ಕೆಲಸಕ್ಕೆ. ಹುಡುಗನ ಇಟ್ಕೋಕ್ಕೆ ಅಂತ ಸುಲಭವಾಗಿ ಹುಡುಗೀರು ಸಿಕ್ತಾ ಇದ್ದ ಕಾಲ ಎಂದೋ ಮುಗಿದುಹೋಯ್ತು.... ಒಂದು ವೇಳೆ ಸಿಕ್ಕಿದ್ರೂ, ನೀವಿರೋಕಾಲೋನೀನಲ್ಲಿ ಬರೀ ಕನ್ನಡ ಮಾತಾಡಕ್ಕೆ ಬಂದ್ರೆ ಕೆಲಸಾ ಆಗತ್ಯೆ ಅಕ್ಕಪಕ್ಕದೋರ ಜತೇಲಿ?....ತಮಿಳು ಬರಬೇಡ್ವೆ.... unfortunately ಚನ್ನಪಟ್ಣ is not Bangalore ....yet."

"ತಮಿಳು ಬರೋರೇ ಬೇಕೂ ಅಂತ ಕೂತ್ಕೊಂಡ್ರೆ ಆಗತ್ತ್ಯೇ ಮಾಮಾ?.... ಹಾಗೆ ನೋಡಿದ್ರೆ ಹೆಣ್ಣು ಹುಡುಗೀರೇ ಆಗಬೇಕೂ ಅನ್ನೋದೂ ಏನೂ ಇಲ್ಲ ಸದ್ಯದ ಶರ್ತಿನಲ್ಲಿ. ಹದಿನಾರು ಹದಿನೇಳು ವರ್ಷದ ಗಂಡು ಹುಡುಗ್ರಾದ್ರೂ ನಡೀಯತ್ತೆ....ಒಂದು ಸ್ವಲ್ಪ ಹಿಂದೀನಾದ್ರೂ ಬಂದಿದ್ರೆ ಚೆನ್ನಾಗಿತ್ತು. ಹಾಗಿಲ್ಲ ಅಂದ್ರೆ ಒಂದಿಷ್ಟು broken English ಅಂತ ಬಂದ್ರೇನೂ ನಡಿಯತ್ತೆ".

Broken Englishಉ?....butler Englishಉ? ಅರೆ, ಹೌದು. ನಮ್ಮ ಪುರೋಹಿತರು ರಾಮಾಶಾಸ್ತ್ರಿಗಳ ಮಗ ಸುಬ್ಬೂನೇ ಯಾಕೆ ಕೇಳಿನೋಡ ಬಾರದು?

"Tenth stardardನಲ್ಲಿ ಮೂರು ವರ್ಷದಿಂದಾ ಘುಂಕೀ ಹೊಡೀತಾ ಇದಾನೋ... ಒಂದು ಮೂರು ಕಾಸು ಸಂಪಾದಿಸ್ಕೊಂಡು ಅವನ ಖರ್ಚು ಅವನು ನೋಡ್ಕೊಳ್ಳೊ ಥರಾ ಆದ್ರೆ ಎಷ್ಟೋ ಹಾಯಾಗಿರ್ತಾ ಇತ್ತು" ಅಂತ ಶಾಸ್ತ್ರಿಗಳು ಸಿಕ್ಕಿದಾಗಲೆಲ್ಲ ಪೇಚಾಡ್ತಾ ಇರ್ತಾರಲ್ಲ....ಹುಡುಗ ಕಟ್ಟುಮಸ್ತಾಗಿದಾನೆ....ಅಡಿಗೇ ಕೆಲಸಾ, ಮುಸುರು ತಿಕ್ಕೋದು ಅಂತ ಅವನ ಕೈನಲ್ಲಿ ಸುಜಾತಾ ಮಾಡಿಸೊಲ್ಲ, ಬರೀ,ಮಗೂನ ನೋಡಿಕೊಂಡು ಮನೇಲಿ ಇರೋದು ಅಂತ ಅನ್ನೋ ಹಾಗಿದ್ರೆ ಸುಬ್ಬೂನ ಒಪ್ಪಿಸೋದು ಕಷ್ಟಾ ಆಗಲಾರದು ಜೊತೆಗೆ ಅವನಿಗೂ ಅಷ್ಟೆ ಇಂಗ್ಲಿಷ್ ಮಾತಾಡ ಬೇಕೂ ಅನ್ನೋ ಆಸೇ ತುಂಬ....ಆದರೆ ಈಗಿನ ಕಾಲದಲ್ಲಿ ಗ್ರಾಜುಯೇಟು ಗಳ ಇಂಗ್ಲಿಷೇ ಅಧ್ವಾನ, ಅಂಥದಲ್ಲಿ ಸುಬ್ಬೂನ ಯಾಕೆ ಬಯ್ಯಬೇಕು?....ಆದ್ರೆ ಒಂದು, ಅವನು ಮಾತಾಡೋದು ಮಾತ್ರ....ಬಲು ತಮಾಷೆಯಾಗಿರತ್ತೆ.

ಹೇಳಿ ಕಳುಹಿಸಿದ್ದು ಹತ್ತು ನಿಮಿಷ ಕೂಡ ಆಗಿಲ್ಲ, ಆಗಲೇ ಓಡಿ ಬಂದ ಅವನು, ಒಂದು ನಾಲಕ್ಕು ಬಟ್ಟೇನ ಚೀಲದಲ್ಲಿ ತುರುಕಿಕೊಂಡು. ನಾಲಕ್ಕಾರು ದಿನದ ಕುರುಂಚಲು ಗಡ್ಡ, ತಲೆ ಕೂದಲು ಕಟಾವಿಗೆ overdue ಅಂತ ಅನಿಸಿದ್ರೂ, ಬೆಂಗಳೂರಿಗೆ ಹೋದಮೇರೆ ಅದೆಲ್ಲ ರಿಪೇರಿ ಆಗತ್ತೆ ಅಂದುಕೊಂಡು ಸುಮ್ಮನಾದೆ.

"ಹೇಳಿದ್ದ ತಕ್ಷಣ ಓಡಿ ಬಂದ್ಬಿಟ್ಟ್ಯಲ್ಲಾ ಸುಬ್ಬೂ, ಊಟ ಗೀಟ ಮಾಡಿದ್ದೀಯಾ ತಾನೆ?" ಸುಜಾತಾ ಪರವಾಗಿ ನಾನೇ ಕೇಳಿದೆ....ಅದಕ್ಕೆ ಬೇರೆ ಕಾರಣಾನೂ ಇತ್ತು, ಅನ್ನಿ.

"Don't worry, uncle! I got already fed up".

ಅದು ಅವನ ಇಂಗ್ಲಿಷ್ ವರಸೆ, ನನಗೆ ಊಟ ಆಗಿದೆ ಅಂತ ಹೇಳೋದಕ್ಕೆ.

ಸುಜಾತಾಗೆ ನಗು ಬಂದ್ರೂ ಕಷ್ಟಪಟ್ಟು ತಡಕೊಂಡಳು....ಆಮೇಲೆ ಸುಬ್ಬೂ ಅವಮಾನ ಆಯ್ತು ಅಂತ ಎಲ್ಲಿ ವಾಪಸು ಹೋಗಿಬಿಡ್ತಾನೋ ಅಂತ ಅನ್ನೋ ಭಯ ಅವಳಿಗೆ.



ಮಾರನೇ ದಿನ ಸುಮಾರು ಹನ್ನೆರಡು ಘಂಟೆ ಇರಬಹುದು. ಅಂಗಡಿಗೆ ಮನೆಯಿಂದ ಚೀಟಿ ಬಂತು.

"ಅರ್ಜಂಟಾಗಿ ಮನೆಗೆ ಬನ್ನಿ....ಸುಬ್ಬೂ ಬೆಂಗಳೂರಿಂದ ಓಡಿಬಂದಿದ್ದಾನೆ.... ಏನೋ ತರಲೆ ಮಾಡಿಕೊಂಡಿದಾನೆ ಅಂತ ಕಾಣುತ್ತೆ....ಏನಾಯ್ತೋ ಅಂದ್ರೆ ಬಾಯಿ ಬಿಡವಲ್ಲ" ಅಂತ.

ಅರೆ ಗ್ರಹಚಾರಾನೆ ಅಂದುಕೊಂಡೋನೆ ಅಂಗಡಿ ಮುಚ್ಚಿ ಮನೇಗೆ ಬಂದು ನೋಡ್ತೀನಿ, ಸುಬ್ಬು ಅಳುಮುಂಖ ಹಾಕಿಕೊಂಡು ಕೂತಿದ್ದಾನೆ. ಯಾರದೋ ಜತೇನಲ್ಲಿ ಹೊಡೆದಾಟ ಮಾಡಿಕೊಂಡು ಬಂದಿದ್ದಾನೆ ಅಂತ ಕಾಣತ್ತೆ. ಬಟ್ಟೆಯಲ್ಲಾ ಮಣ್ಣಾಗಿದೆ....ಕಪಾಳಾನೂ ಸ್ವಲ್ಪ ಊದಿಕೊಂಡ ಹಾಗಿದೆ.

ಏನಾಯ್ತು ಅಂತ ನಾನು ಕೇಳೋಕ್ಕೆ ಮುಂಚೇನೇ ಅವನೇ ಮಾತು ಶುರು ಮಾಡಿದ, ಅತ್ತುಕೊಂಡು:

"Uncle, ನೀವು ಏನು ಬೇಕಾದ್ರೂ ಮಾಡಿಕೊಳ್ಳಿ, ಆದ್ರೆ ಹೆಂಗಸರ ಕೈಲಿ ಒದೆ ತಿನ್ನೋ ಅವಸ್ಥೆಗೆ ಮಾತ್ರ ಸಿಕ್ಕಿಹಾಕಿಕೊಳ್ಳಬೇಡಿ."

ಎಲಾ ಇವನ, ನಾನ್ಯಾಕೆ ಹೆಂಗಸರ ಕೈಲಿ ಒದೇ ತಿನ್ನಬೇಕು....ಮದುವೆ ಯಾದಾಗಿನಿಂದಲೂ ಹೇಳಿದ ಹಾಗೆ ಕೇಳಿಕೊಂಡು ಇಲ್ಲವೇ?

"ನನಗೆ ಉಪದೇಶ ಮಾಡೋದು ಇರಲಿ, ನೀನು ಏನು ಮಾಡಿಕೊಂಡು ಬಂದಿದೀಯ ಬೆಂಗಳೂರಲ್ಲಿ ಅದು ಹೇಳೋ ಗೂಬೆ ! .... ಸುಜಾತನ ಕಾಲೋನಿ ಯಲ್ಲಿ ಹುಡುಗಿಯರು ಯಾರನ್ನಾದ್ರೂ ಚುಡಾಯಿಸಿ ಒದಸ್ಕೊಂಡು ಬಂದಿದ್ಯೋನೋ?"

"ನಿಮಗೇ ಗೊತ್ತಲ್ಲ ಅಂಕಲ್, ನಾನು ಯಾವತ್ತೂ ಹಾಗೆ ಮಾಡೋನಲ್ಲ ಅಂತ.... ಏನಿದ್ರೂ ದೂರದಿಂದ ನೋಡಿ ಆಸೆ ತೀರಸ್ಕೋತೀನೇ ಹೊರತು ಅವುಗಳ ಹತ್ತಿರ ಹೋಗೋಕೇ ಪುಕ್ಕಲು ನನಗೆ....ನನಗೆ ಗ್ರಹಚಾರ ಬಿಡಿಸಿದೋಳು ಸುಜಾತಕ್ಕನ ಪಕ್ಕದ ಮನೇಲಿದ್ದಾಳಲ್ಲ, ಸೇಠು....ಅದೇ....ಆ....ಮೀಸೆ ಮೇಡಂ"

ಸೇಠು? ಮೀಸೆ ಮೇಡಂ? ....ಓಹೋ, ಸುಬ್ಬೂ ಹೇಳ್ತಾ ಇರೋದು ಮಿಸೆಸ್ ಬಗಲಾನಿ ಇದಾರಲ್ಲ ಅವರ ವಿಷಯ....ಹೌದು, ಅವರಿಗೆ ಇದ್ಯಲ್ಲ ಮೀಸೆ, ಅಷ್ಟೊಂದು ಹುಲುಸಾಗಿ ನನಗೆ ಮೂವತ್ತು ವರ್ಷ ಆದ್ರೂ ಬಂದಿರಲಿಲ್ಲ ....ಒಳ್ಳೆ ಫೈಲ್ವಾನ್ ಇದ್ದ ಹಾಗೆ ಇದ್ದಾರೆ, ಬೇರೆ....ಅವರ ಕೈಯಲ್ಲಿ ಒದೇ ತಿಂದಿದ್ರೆ, ಸುಬ್ಬೂ ಬದುಕಿ ಬಂದದ್ದೇ ಹೆಚ್ಚು....ಆದ್ರೆ ಆಕೆ ಅಂಥಾ ಹೆಂಗಸಲ್ಲವಲ್ಲ? ಬಹಳಾ ಒಳ್ಳೆ ಸ್ವಭಾವಾನೇ?

"ನೋಡಿ, ಅಂಕಲ್, ಇವತ್ತು ಹತ್ತು ಘಂಟೆ ಹೊತ್ತಿಗೆ ಸುಜಾತಕ್ಕಾನೂ ಅವ್ರ ಯಜಮಾನ್ರೂ ಆಫೀಸಿಗೆ ಹೋದ್ರು. ಮಗೂ ಇನ್ನೂ ಎದ್ದಿರಲಿಲ್ಲ ಸರಿ. ಮಾಡೋಕ್ಕೆ ಏನೂ ಇಲ್ಲವಲ್ಲ ಬಿಸಿಲಾದ್ರೂ ಕಾಯಿಸಿಕೊಳ್ಳೋಣ ಅಂತ ಅಂದ್ಕೊಂಡು ಮನೆ ಹೊರಗಡೆ ನಿಂತಿದ್ದೆ, ಆ ಟೈಂನಲ್ಲಿ ಆಕೇನೂ ಅಲ್ಲಿ ಬಂದ್ಳು. ನನ್ನನ್ನ ನೋಡಿದೋಳೆ, ಅಂಕಲ್, ಅವಳೇ ಮಾತು ಶುರೂಮಾಡಿದ್ಳು.... ನೀನೇನಾ ಸುಜಾತಾ ಮನೇಲಿ ಹೊಸದಾಗಿ ಬಂದಿರೋ ಜವಾನಾ ಅಂತ....ನಾನೇನು ಜವಾನಾನಾ ಅಂಕಲ್? ಹಾಗೇಂತ ಹೇಳಿದ್ದೇ ತಡ, ಆ ಹೆಂಗಸು ಕಿರುಚಕ್ಕೆ ಶುರು ಮಾಡಿದ್ಳು, ನನ್ನನ್ನ ಭದ್ರವಾಗಿ ಹಿಡಕೊಂಡು. ನನಗೋ ಗಾಬರೀಲಿ ಅವಳು ಏನು ಕಿರಚಕೋತಾ ಇದಾಳೆ ಅಂತ ಮೊದಲು ಮೊದಲು ಗೊತ್ತಾಗಲಿಲ್ಲ ಅವಳು ಕೂಗೋದನ್ನ ನೋಡಿ ಅವರ ಮನೇಲಿ ಇದಾಳಲ್ಲ ಮುದುಕಿ, ಅವರಮ್ಮ ಅಂತ ಕಾಣತ್ತೆ, ಕಸಾ ಗುಡಿಸ್ತಾ ಇದ್ದೋಳು ಪೊರಕೆ ಹಿಡಕೊಂಡೇ ಬಂದು ನನಗೆ ತದಕಕ್ಕೆ ಶುರುಮಾಡಿದ್ಳು....ಹೆಂಗಸೂ ಅಂತ ಹೆಸರಿಗೆ, ಹ್ಯಾಗೆ ತದಕಿದಳೂ ಗೊತ್ತಾ ಅಂಕಲ್ ....ಅಷ್ಟು ಸಾಲದೂ ಅಂತ Call police, call police ಅಂತ ಬೇರೆ ಅಕ್ಕ ಪಕ್ಕದ ಮನೆಯವರಿಗೆ ಕೂಗಿ ಹೇಳ್ತಾ ಇದಾಳೆ....ನನಗೋ ಭಯಾ ಆಗಿ ಅದು ಹ್ಯಾಗೆ ತಪ್ಪಿಸಿಕೊಂಡ್ನೋ ದೇವರೇ ಬಲ್ಲ....ಸದ್ಯ ಜೇಬಲ್ಲಿ ನಾಲಕ್ಕು ಕಾಸು

ಇತ್ತು. ಓಡಿಹೋದೇನೋ ಬಸ್ ಹಿಡಕೊಂಡು ವಾಪಸ್ಸು ಇಲ್ಲಿಗೆ ಬಂದದ್ದಾಯಿತು. ಬೆಂಗಳೂರೂ ಸಾಕು ಸುಜಾತಕ್ಕನ ಮನೆ ಕೆಲಸಾನೂ ಸಾಕು....ಇಬ್ಬರಿಗೂ ದೊಡ್ಡ ನಮಸ್ಕಾರ``.

ಸುಬ್ಬೂ ತರಲೆ ಏನೂ ಮಾಡಿಲ್ಲ. ಆದ್ರೂ, ಒದೇ ತಿಂದಿದ್ದಾನೆ ಅನ್ನೋದು ವಾಸ್ತವ. ಮಿಸೆಸ್ ಬಗಲಾನಿ ಒಳ್ಳೆ ಹೆಂಗಸು, ಅವರು ಯಾಕೆ ಹೀಗೆ ಆಡಿದ್ರು ಅನ್ನೋದು ಅರ್ಥವಾಗಲಿಲ್ಲ. **A detailed investigation is in order** ಅಂತ ಅಂದ್ಕೊಂಡು:

"ಆ ಮೊಸೆ ಮೇಡಂ ಅಂದ್ಯಲ್ಲ, ಅವರು ನಿನ್ನ ಜತೆಗೆ ಕನ್ನಡದಲ್ಲಿ ಮಾತಾಡಿದ್ರಾ ಸುಬ್ಬೂ?" ಅಂತ ಕೇಳಿದೆ.

"ಎಲ್ಲಿ ಬಂತೂ ಅಂಕಲ್? ಅವಳು ಇಂಗ್ಲಿಷಿನಲ್ಲಿ ನನ್ನನ್ನ ಮಾತನಾಡಿಸಿದ್ದು, ....ನಾನು **answer** ಮಾಡಿದ್ದೂ ಇಂಗ್ಲಿಷ್‌ನಲ್ಲೆ".

ಸರಿ ಈಗ ಗೊತ್ತಾಯಿತು,ಅವರೇನೋ ಕೇಳಿದ್ದಾರೆ. ಇವನೇನೋ ಹೇಳಿದ್ದಾನೆ, ....ಇವನ ಇಂಗ್ಲಿಷು ಅವರಿಗೆ ಅರ್ಥವಾಗದೆ ಇಷ್ಟೆಲ್ಲ ಅವಸ್ಥೆಯಾಗಿದೆ. ಆದರೆ, ಅಂಥಾದ್ದೇನು ಇರಬಹುದೂ ಅಂತೀನಿ".

''ಆಕೆ ಏನು ಕೇಳಿದ್ರು, ಇಂಗ್ಲಿಷ್‌ನಲ್ಲಿ ಅಂತ ಏನಾದ್ರೂ ಜ್ಞಾಪಕ ಇದ್ಯೇನೋ?''

"**Sure**, ಅಂಕಲ್....**You the new servant?** ಅಂತ ಕೇಳಿದ್ರು ಅಷ್ಟೇ. ಅದು ಚೆನ್ನಾಗಿ ಜ್ಞಾಪಕ".

''ಅದಕ್ಕೆ ನೀನೇನು ಹೇಳಿದಿ, ಉತ್ತರವಾಗಿ?"

"ಬಂದಿರೋದು ಜವಾನನ ಕೆಲಸಕ್ಕಲ್ಲ, ಮಗೂನ ಎತ್ತೋದಕ್ಕೆ ಅಂತನ್ನೋದನ್ನೇ ಇಂಗ್ಲಿಷಲ್ಲಿ ಹೇಳಿದೆ. **I am not servant,............I AM CHILD LIFTER**".





ಕೋರವಂಜಿಯಿಂದ

# "ಇರಲಿ ದೇವ್ರು....ತಂಪು"

—ಶಿವಯ್ಯ

"ತರಕಾರೀ, ಬೇಕೇನಮ್ಮಾ ತರಕಾರೀ"

ಅಂಗಡಿಗೆ ಹೋಗಿ ಒದ್ದಾಡುವ ಬದಲು ಮನೆ ಬಾಗಿಲಿಗೆ ಬಂದವನ ಹತ್ತಿರವೇ ವ್ಯಾಪಾರ ಮಾಡಿದರೆ ಕಷ್ಟ ತಪ್ಪುತ್ತೆ ಎಂದು, ಅವನನ್ನು ಕೂಗಿದೆ. ಮಂಕರಿ ಹೊತ್ತುಕೊಂಡು ಆತನೂ ಬಂದ.

"ಏನಿದೆಯಯ್ಯಾ"

"ಬದನೇಕಾಯಿ, ಸೋರೇಕಾಯಿ, ಗೋರೀಕಾಯಿ"

"ಸೊಪ್ಪು ಏನೂ ಇಲ್ಲವೇ" ಎಂದೆ.

"ಊರಲ್ಲೆಲ್ಲಾ ಖಾಯಿಲೆ ಸ್ವಾಮಿ, ಸೊಪ್ಪು ಯಾರೂ ಕೇಳೋಕಿಲ್ಲ"

"ಸರಿ ಬದನೇಕಾಯಿ ಎಷ್ಟಪ್ಪಾ ಪಂಚೇರಿಗೆ"

"ನಾಲ್ಕಾಣೆ ಸ್ವಾಮಿ"

"ಬಲಿತಿದೆಯಲ್ಲಯ್ಯಾ ಬರೀ ಬೀಜವೇನೋ"

"ಹಾಗಾದರೆ, ಸೋರೇಕಾಯಿ ತೊಗೊಳ್ಳಿ ಬುದ್ಧಿ, ಬಲು ಚೆನ್ನು"

"ಸೋರೆಯಕಾಯಿ ಯಾರಿಗೆ ಬೇಕಯ್ಯ, ಬದನೇಕಾಯೇ ಕೊಡು".

ಬದನೇಕಾಯಿ ತೂಗುತ್ತಾ, ಸೋರೆಕಾಯಿ ತಂಪು ಎಂದ. ನನಗ್ಯಾಕೋ ಇದು ಇಂಪಾಗಿ ಕಂಡಿತು. ನನ್ನದು ಉಷ್ಣ ಪ್ರಕೃತಿ ಒಂದು ನಿಮಿಷ ಹಾಗೆಯೇ ಯೋಚಿಸಿದೆ. ಈ ಆಂದೋಳನವನ್ನು ಅವನೂ ಗಮನಿಸಿದ್ದಿರಬೇಕು.

"ಇರಲಿ ದೇವ್ರು ಎರಡು ಸೋರೆಕಾಯೂ ಹಾಕ್ತೇನೆ".

ನನ್ನ ಮುಖನೋಡಿ ದೇವ್ರು ಎಂಬ ಭ್ರಮಣೆ ಬರಬೇಕಾದರೆ ಏನೋ ಇರಬೇಕು ನನ್ನ ಮುಖದಲ್ಲಿ ನನ್ನ ಸಾತ್ವಿಕ ಪ್ರಕೃತಿ ಆತ್ಮಜ್ಞಾನ. ವೇದಾಂತ ಮಾರ್ಗ

ಎಲ್ಲವನ್ನೂ ಏಕೀಕರಿಸಿ, ಇರಲಿ ದೇವ್ರು ಎಂದು ತಂಪಾದ ಸೋರೆಯಂಕಾಯಿಂ ಜುಲುಮ್ಮೂ ಮಾಡಿ ಮಾರಬೇಕಾದರೆ, ಈಶ್ವರನ ಕೈವಾಡ ಇದರಲ್ಲಿ ಇರಲೇ ಬೇಕು ಎನ್ನಿಸಿತು.

ಸರಿ, ಬಲಿತ ಬದನೇಕಾಯಿಂನ ಜತೆಗೆ ಬೇಡದ ಸೋರೇಕಾಯನ್ನೂ ಕೊಂಡು ಕೊಂಡೆ.

* * *

ಸರಕಾರದ ಅಕ್ಕಿ ಅಂಗಡಿ. ಬೆಳಿಗ್ಗೆ ಹತ್ತು ಗಂಟೆ. ಕಛೇರಿ ಅವಸರ. ನೂಕು ನುಗ್ಗಲು.

ಅಂಗಡಿಯ ನೌಕರನನ್ನು ಕುರಿತು.

"ಕೊಯಂಮುತ್ತೂರು ಸಣ್ಣ ಬಂದಿದೆಯೇನ್ರಿ"

"ಬಂದಿದೆ ಸ್ವಾಮಿ. ಆದರೆ ಅಷ್ಟು ಚೆನ್ನಾಗಿಲ್ಲ"

"ಚೆನ್ನಾಗಿಲ್ಲದೇ ಇದ್ದರೆ ಪರವಾಗಿಲ್ಲ. ಎರಡು ರೂಪಾಯಿಗೆ ಕೊಡಿರಿ".

"ದಿಬ್ಬಣಸಾಲೆ ಚೆನ್ನಾಗಿದೆ ಸ್ವಾಮಿ, ಒದಗುತ್ತೆ".

"ಒದಗುವುದಿರಲಿ, ಹೊಟ್ಟೆ ಒಳಗೂ ಒದೆಯುತ್ತಲ್ರೀ ಅದು"

''ಇರಲಿ ದೇವ್ರು, ತಗೊಂಡು ನೋಡಿ ಮೈಗೆ ತಂಪು"

ಅರೇ, ಈ ನೌಕರನೂ ಅದೇ ಮಾತು. ನಾನು ದೇವ್ರು ಉಷ್ಣದ ಮೈಯಿನ ದೇವರು, ತಂಪಾಗಲೆಂದು ದಿಬ್ಬಣಸಾಲೆ. ಇಬ್ಬರು ಹೀಗೇ ಹೇಳಿದ್ದಾರೆ.

"ಇರಲಿ ಎಂದು ಎರಡು ರೂಪಾಯಿನ ದಿಬ್ಬಣಸಾಲೆ ಅಕ್ಕಿಕೊಂಡು ತಂಪಾಗಿ ಮನೆಗೆ ಬಂದೆ.

* * *

ಸಂಜೆ ಏಳು ಗಂಟೆ. ರೈಲ್ವೆ ನಿಲ್ದಾಣದ ಪುಸ್ತಕದ ಅಂಗಡಿಗೆ. ತರಹ ತರಹ ಮಾಸಪತ್ರಿಕೆಗಳು, ಕಣ್ಣು ಸೆಳೆಯುವ ಹೆಣ್ಗಳ ಚಿತ್ರಗಳು. ಏನಾದರೂ ಒಂದು ಕತೆಯ ಪತ್ರಿಕೆಯನ್ನು ತೆಗೆದುಕೊಂಡು ಹೋಗೋಣ ವೆಂದು ಅಲ್ಲಿಗೆ ಹೋದೆ

"ಸಣ್ಣ ಕತೆಗಳ ಪತ್ರಿಕೆಗಳು ಯಾವುದು ಇದೆಯಯ್ಯ"

"ಕಥಾಂಜಲಿ, ಕಥಾಕುಂಜ, ಕಥಾವಳಿ, ಕಥಾಸರಿತ್ಸಾಗರ"

ಒಂದೇ ಉಸರಿನಲ್ಲಿ ಅಮರ ಹೇಳಿದ ಹಾಗೆ ಹೇಳಿದ. ಕನ್ನಡದಲ್ಲಿ ಇಷ್ಟಾದರೂ ಇದೆಯಲ್ಲ ಎಂದು ಈ ತಿಂಗಳ ಪತ್ರಿಕೆ ಯಾವುದಾದರೂ ಕೊಡಯ್ಯಾ ಎಂದೆ.

ಇದು ನೋಡಿದ್ದೀರಾ ಎಂದು ಒಂದು ಚಲನಚಿತ್ರ ಮಾಸಪತ್ರಿಕೆಯನ್ನು ಕೊಟ್ಟ. ಒಂದೆರಡು ಪುಟ, ಒಂದೆರಡು ಚಿತ್ರ ನೋಡಿದೆ.

ನೋಡಿದೆನಯ್ಯಾ, ಕತೆ ಮಾಸಪತ್ರಿಕೆ ಕೊಡಯ್ಯಾ ಎಂದೆ.

ಇಲ್ಲಾ ಸ್ವಾಮಿ, ಒಳ್ಳೆಯ ಚಿತ್ರಗಳಿವೆ. ಕನ್ನಡ ಚಿತ್ರೋದ್ಯಮದ ಕತೆಯೆಲ್ಲಾ ಇದೆ. ವಿಮರ್ಶೆಗಳೂ ಇವೆ. ವರ್ಣ ವರ್ಣದ ಬೊಂಬೆಗಳೂ ಇವೆ.

ಕಾಲೇಜು ಹುಡುಗರಿಗೆ ಈ ರೀತಿ ಹೇಳಿದರೆ ಚೆನ್ನ. ನನಗೆ ಹೇಳಿದರೆ, ಏನು ಪ್ರಯೋಜನ.

ನೀವು ಬೇಕಾದ್ದು ತೊಗೊಳ್ಳಿ. ಆದರೆ, ಇದೂ ಇರಲಿ ದೇವ್ರು, ಓದಿದರೆ ತಂಪು.

ಇದೇನಿದು ಮಸಲತ್ತು ಮಾಡಿಕೊಂಡಿರುವ ಹಾಗಿದೆಯಲ್ಲ. ಹೋದಲ್ಲೆಲ್ಲಾ ಇದೇ ಮಾತು. ಇರಲಿ ದೇವ್ರು ತಂಪು. ಅದೇನು ಸೋಜಿಗವೋ ನೋಡಿ. ಈ ಬಾಣ ಬಿಟ್ಟರೆ ನಾನು ಸುಸ್ತು. ಮಾತಿಲ್ಲದೆ ಅವನು ಕೊಟ್ಟದ್ದು ಕೊಂಡು, ಹಿಂತಿರುಗಿದೆ.

•   •   •

ಕಬ್ಬನ್ ಬನ. ಸಂಧ್ಯಾರಾಗ. ಕಣ್ಣು ಚುಚ್ಚುವ ಜಾರ್ಜೆಟ್ಟುಗಳು. ಹಾಗೂ ಹೆಣ್ಣುಮಕ್ಕಳು. ಮಾರಲಿಕ್ಕೆಂದು ಬಂದ ಮೋಟಾರುಗಳು. ಮುಖ್ಯ ಕಳ್ಳಕಾಕರ ಸಂತೆಯೋ, ಚತುರ್ವಿದ್ಯಾಪಾರಂಗತರ ಕೂಟವೋ ಎಂಬಂತೆ.

ಆಹಾರ ನಿಲಯಕ್ಕೆ ಹೋದೆ. ಹೋದ ಎರಡು ಗಂಟೆಗಳಲ್ಲೇ ಸರಪರಾಜಿನ ಹುಡುಗನೊಬ್ಬನು ಬಂದನು.

"ಏನು ಸಾರ್"

"ಏನಿದೆಯುಯ್ಯಾ"

"ಸಾಲಡ್ ದೋಸೆ, ಪೂರಿ ಷೇವಾರ್, ಮಸಾಲೆ ಇಡ್ಲಿ" ಅರೆ, ಇದೇನು ಸೋಜಿಗ. ಪೂರ್ವ ಪಶ್ಚಿಮ ಸಮ್ಮಿಳನ, ಹಿಂದೂ ಮುಸಲ್ಮಾನ ಏಕೀಕರಣ. ಶಾಖಾಹಾರಿ, ಶಾಖಾಹಾರಿಗಳ ಆಹಾರಿ, ಇದೂ ಒಂದು ಬಗೆಯ ಸೋಜಿಗವೇ. ಇರಲಿ ಎಂದು.

"ಪೂರಿ ಷೇವಾರ್ ಒಂದು ಪ್ಲೇಟು" ಎಂದೆ.

ಹುಡುಗನು ಮಂದಿರದೊಳಕ್ಕೆ ಹೋದ. ಇನ್ನೂ ಸ್ವಲ್ಪ ಹೊತ್ತಾದ ಮೇಲೆ ಬಂದ.

"ಸಾರ್, ಪೂರಿಷೇರ್ವಾ ಮುಗಿದುಹೋಗಿದೆ. ಸಾಲಡ್ ದೋಸೆ ತರಲೇ?"

"ಹೋಗಲಿ ಬಿಡಯ್ಯಾ ಬರೀ ಕಾಫಿ ತೆಗೆದುಕೊಂಡು ಬಾ''

"ಹಾಗಲ್ಲಾ ಸಾರ್. ಸಾಲಡ್ ದೋಸೆ ಬಹಳ ಪರವಾಯಿಷಿ ಒಂದು ಒಂದು ತೊಗೊಳ್ಳಿ ಬಿಸಿ ಬಿಸಿ ತರುತ್ತೇನೆ. ಒಂದಿರಲಿ ದೇವ್ರು ಬಹಳ ತಂಪು''.

ತಿರುಗಿ ಅದೇ. ತಿರುಗಿ ಸುಸ್ತು. ಆಗಲಿ ಎಂದು ಸಂಜ್ಞೆ ಮಾಡಿದೆ. ಬಂದ ಮೇಲೆ ತಿಂದೆ. ಎಲ್ಲಾ ದೋಸೆಗಳ ಹಾಗೇ ಇತ್ತು. ಆದರೆ ಮಧ್ಯೆ ಮಧ್ಯೆ ಸೌತೇಕಾಯಿ ಸಿಕ್ಕಿದ ಹಾಗೂ ಇತು. ಆದರೂ ಏನೋ ಹೇಳಿದ್ದಾನಲ್ಲಾ. ಇರಲಿ ದೇವ್ರು, ಮೈಗೆ ತಂಪು. ನೋಡಿಯೇ ಬಿಡೋಣ.

* * *

ಸಂಪಾದಕರಲ್ಲಿ ವಿಜ್ಞಾಪನೆಗಳು:

ಮೇಲ್ಕಂಡ ನನ್ನ ಪ್ರಥಮ ಪ್ರಯತ್ನವನ್ನು ನಿಮಗಾಗಿ ಕಳಿಸಿದ್ದೇನೆ. ಅಷ್ಟಾಗಿ ರುಚಿಸದೇ ಇರಬಹುದು. ಆದರೂ ಇರಲಿ ದೇವ್ರು, ಓದಿದವರಿಗೆ ತಂಪು ಆಗಬಹುದು.

ನಿಮ್ಮ ವಿಶ್ವಾಸಿ,
ಶಿವಯ್ಯ.





“ನನ್ನ ಕತ್ತು ನೋಡಿ ಮಂತ್ರಿಗಳು ಹೊಟ್ಟೆ ಕಿಚ್ಚು ಪಟ್ಕೊಂಡು ಹೋದ್ರು ಕಣೋ ಎಷ್ಟೆಲ್ಲಾ ಹಾರ ಹಾಕಿಸ್ಕೊಭೊದಾಗಿತ್ತು ಅಂತ”

"ನಕ್ಕ್ಯಾಂವಾ ಗೆದ್ದಾಂವಾ"

## "ಕಡೀ ಸೆಂಗಾ"

—ಶೀನೂ

---

ಒಬ್ಬ ವ್ಯಕ್ತಿಯ ಜೀವನದಲ್ಲಿ ಕೆಲ ಕೆಲವು ದಿನಗಳು ಬಲು ಮಹತ್ವದ ದಿನಗಳೆಂದು ಪರಿಗಣಿಸಲ್ಪಡುತ್ತವೆ. ಸೇವಾ ನಿವೃತ್ತಿಯ ದಿನ ಅಂತಹ ದಿನಗಳಲ್ಲೊಂದು

ಮೂವತ್ತೈದು ವರುಷಗಳ ಅಖಂಡ ಸೇವೆಯ ನಂತರ ಅಂದು ನಾನು ನಿವೃತ್ತನಾಗಲಿದ್ದೆ. ಬೆಳಗಿನಿಂದ ಆಫೀಸಿನಲ್ಲಿ ಎಲ್ಲರೂ ಬಂದು ಕೈಕುಲುಕಿ ಬೀಳ್ಕೊಡುವ ಮಾತನಾಡುತ್ತಿದ್ದರು. ಇಡಿಯ ದಿನ ಆಫೀಸಿನ ವಾತಾವರಣದಲ್ಲಿ ಇನ್ನಿಲ್ಲದ ಸ್ನೇಹ, ಗೌರವ ಭಾವಗಳಲ್ಲದೇ ನಾಳೆಯಿಂದ ಅಗಲಬೇಕಲ್ಲವೇ? ಎಂಬ ನೋವು ಮಾರ್ದವತೆಗಳ ಹೊಳೆಯೇ ಹರಿಯುತ್ತಿತ್ತು.

ಸಂಜೆಯ ಬೀಳ್ಕೊಡುವ ಸಮಾರಂಭದಲ್ಲಂತೂ ಎಲ್ಲರ ಅಂತಃಕರಣಕ್ಕೆ ಮಹಾಪೂರವೇ ಬಂದಂತಾಗಿತ್ತು. ವೇದಿಕೆಯ ಮೇಲೆ ಬೆಟ್ಟದಷ್ಟು ಹಾರ ತುರಾಯಿಗಳ ಮಧ್ಯ ನಾನು ಮೂಕ ಪ್ರೇಕ್ಷಕನಂತೆ ಕುಳಿತಿದ್ದೆ. ಮೂವತ್ತೈದು ವರುಷಗಳ ಸೇವೆಯಲ್ಲಿ ಸ್ಮರಣೆಗೆ ಕೊರತೆಯೇ? ಮನದಾಳದಲ್ಲಿ ಹಳೆಯ ನೆನಪುಗಳ ಸಂತೆಯೇ ಸೇರಿತ್ತು. ಹೊರಗೆ ಭಾಷಣಗಳ, ಅಭಿನಂದನೆಗಳ, ಹಾರೈಕೆಗಳ ಪೈಪೋಟಿಯೇ ನಡೆದಿತ್ತು.

"ಶ್ರೀಯುತ ಶೀನೂ ಅವರು ವರಿಷ್ಠ ದರ್ಜೆಯ ಅಧಿಕಾರಿಗಳೇ ಆಗಿದ್ದರೂ ತಮ್ಮ ಕೈಕೆಳಗಿನ ಎಲ್ಲ ಕಿರಿಯರನ್ನೂ ಆತ್ಮೀಯ ಭಾವದಿಂದಲೇ ನೋಡುತ್ತಿದ್ದರು...."

ಜ್ಯೂನಿಯರ್ ಇಂಜಿನಿಯರ್ ಮಲ್ಲಪ್ಪಗೌಡ ಹೇಳುತ್ತಿದ್ದ. ಒಳ್ಳೆಯ ಹುಡುಗ ಕೆಲಸದಲ್ಲಿ ಅಷ್ಟಕ್ಕಷ್ಟೆ. ಆದರೆ ಪಾಪದ ಹುಡುಗ ನಾನೇ ಅವನನ್ನು ಸರ್ವೀಸಿನಲ್ಲಿ ಖಾಯಂ ಮಾಡಿಸಿದ್ದೆ.

"....ಶ್ರೀಯುತ ಶೀನೂ ಅವರ ಹೃದಯ ವೈಶಾಲ್ಯ, ದಯೆ, ಕರುಣೆ ಇತ್ಯಾದಿ ಮಾನವೀಯ ಗುಣಗಳ ಬಗ್ಗೆ ಎಷ್ಟು ಹೇಳಿದರೂ ಕಡಿಮೆಯೇ........ಪರಮಾತ್ಮ ಅವರಿಗೆ ಆಯುರಾರೋಗ್ಯವನ್ನೂ ಶಾಂತ, ಸ್ವಸ್ಥ ನಿವೃತ್ತ ಜೀವನವನ್ನೂ ಕರುಣಿಸಲಿ........" ಹೆಡ್‌ಕ್ಲರ್ಕ ವರದರಾಜ ಅಯ್ಯಂಗಾರಿ ಮಾತನಾಡುತ್ತಿದ್ದ.

ಅಯ್ಯಂಗಾರಿ ಒಳ್ಳೆಯ ಖದೀಮ, ಎರಡು ಸಲ ಸಿ.ಬಿ.ಆಯ್. ಬಲೆಯಲ್ಲಿ ಸಿಕ್ಕಿ ಬೀಳುತ್ತಿದ್ದ. ಪಾಪ ಮಕ್ಕಳೊಂದಿಗ. ನಾನೇ ಬಿಡಿಸಿದ್ದೆ.

"........ಶ್ರೀಮಾನ್ ಶೀನೂ ಅವರು ಅತ್ಯಂತ ದಕ್ಷ ಹಾಗೂ ನಿಷ್ಠ ಅಧಿಕಾರಿಗಳಾಗಿದ್ದರು. ಅವರು ಶೋಷಕ ವರ್ಗಕ್ಕೆ ಸೇರಿದವರೇ ಆಗಿದ್ದರೂ ಶೋಷಿತರ ಮೇಲೆ ಅವರಿಗೆ ಎಲ್ಲಿಲ್ಲದ ಪ್ರೀತಿಯಿತ್ತು. ಅವರ ಮಮತೆಗೆ ಪಾತ್ರರಾಗದ ಕಿರಿಯರೇ ಇಲ್ಲವೆಂದು ಹೇಳಬೇಕು...." ಕಾರ್ಮಿಕರ ಯೂನಿಯನ್ ಸೆಕ್ರೆಟರಿ ನಾಮದೇವ ಹೇಳುತ್ತಿದ್ದ. ವಾಸ್ತವದಲ್ಲಿ ಇವನೇ ನನ್ನನ್ನು ಶೋಷಿಸುತ್ತಿದ್ದ. ಆದರೂ ಎಷ್ಟೋ ಕಾರ್ಮಿಕ ಧುರೀಣರಿಗಿಂತ ಇವ ಮೇಲು.

"....ಶ್ರೀ ಶೀನೂ ಅವರ ಆಡಳಿತ ವೈಖರಿ ಎಲ್ಲರೂ ಮೆಚ್ಚತಕ್ಕದ್ದೇ. ಇವರು ಸ್ವಂತಕ್ಕೆ ಶಿಸ್ತಿನ ಸಿಪಾಯಿಯಾಗಿದ್ದರು. ಹಾಗಾಗಿ ಸ್ವಲ್ಪ ಕೂಡ ಅಶಿಸ್ತನ್ನು ಅದಕ್ಷತೆಯನ್ನು ಇವರು ಸಹಿಸುತ್ತಿರಲಿಲ್ಲ. ಡಿಪಾರ್ಟಮೆಂಟಿನ ಎಲ್ಲ ಅಧಿಕಾರಿಗಳಿಗೆ ಇವರು ಹಿರಿಯಣ್ಣನಂತೆಯೇ ಸಲಹೆ ಸೂಚನೆಗಳನ್ನು ಕೊಡುತ್ತಿದ್ದರು. ಇವರ ಮಾರ್ಗದರ್ಶನದಲ್ಲಿ ಎಷ್ಟೋ ಕಿರಿಯರು ಕೆಲಸದ ಡಿಪಾರ್ಟಮೆಂಟಿನ ಸಿಕ್ಕು, ಪೇಚುಗಳನ್ನು ಕಲಿತುಕೊಂಡು ಇಂದು ಶ್ರೇಷ್ಠ ಅಧಿಕಾರಿಗಳಾಗಿದ್ದಾರೆ. ಶ್ರೀಯುತರ ಮಾರ್ಗದರ್ಶನದಲ್ಲಿ ನಮಗೆ ಇನ್ನೂ ಇನ್ನೂ ಸಿಕ್ಕಿದ್ದರೆ ಸಂತೋಷವಾಗುತ್ತಿತ್ತು....". ಆಫೀಸರ, ಅಸೋಸಿಯೇಶನ್ನಿನ ರಾಮಮೂರ್ತಿ. ಆಫೀಸಿನ ಮೇಜು, ಕುರ್ಚಿ, ಗೋಡೆ ಕಂಭಗಳು ಕೂಡ ಇವನ ಕೃಷ್ಣಲೀಲೆಯ ಕತೆಗಳನ್ನು ಸಾರುತ್ತಿವೆ.

"....ಜಾತಸ್ಯ ಮರಣಂ ಧೃವಂ ಎಂಬಂತೆ ನೋಕರಸ್ಯ ನಿವೃತ್ತಿಂ ಧೃವಂ ಎಂದು ಹೇಳಬೇಕಲ್ಲವೆ........"ಮ್ಯಾನೇಜರ ಸೋಮಯಾಜಿಯ ಹಾಸ್ಯ. ಇವನು ಬ್ರಾಹ್ಮಣನಾದದ್ದಕ್ಕೆ ಮತ್ತೆ ಮತ್ತೆ ಅಭದ್ರ ಸಂಸ್ಕೃತ ಮಾತನಾಡುತ್ತಿರುತ್ತಾನೆ.

"....ಇವರು ಆಫೀಸಿನ ಮಹಿಳಾ ಸಿಬ್ಬಂದಿಗಳಿಗೆಲ್ಲ ಹಿರಿಯರಂತಿದ್ದರು. ಮಹಿಳೆಯರೆಂದರೆ ಇವರಿಗೆ ಗೌರವ...." ಸ್ಟೇನೋ ಶೀಲಾ ಹೇಳುತ್ತಿದ್ದಳು. ಪಾಪ ಈ ಹುಡುಗಿ ಹದಿನೈದು ವರುಷಗಳ ಹಿಂದೆ ಕೆಲಸಕ್ಕೆ ಸೇರಿದಾಗ,ತುಂಬು ಹರೆಯದಲ್ಲಿ ಎಷ್ಟೊಂದು ಪ್ರಮಾಣಬದ್ಧವಾಗಿ shapely ಇದ್ದವಳು ಈಗ ಅಧ್ವಾನವಾಗಿ ಮೈ ಬಿಟ್ಟು ಶಿಕ್ಷೆಪಿತಳಾಗಿದ್ದಾಳೆ.

ಅಂತೂ ಅಭಿನಂದನೆಗಳ ಸುರಿಮಳೆ ಸುರಿದು ಕೊನೆಯದಾಗಿ ನಾಲ್ಕು ಮಾತು ಹೇಳಲು ನಾನು ನಿಂತೆ. ಇಡಿಯ ಸಭಾಂಗಣವೇ ಸೂಜಿ ಬಿದ್ದರೂ ಸದ್ದಾಗುವಷ್ಟು ಶಾಂತವಾಗಿತ್ತು. ನನ್ನ ಗಂಟಲು ಕಟ್ಟಿತ್ತು. ದನಿ ಹೊರಡದಾಗಿತ್ತು. "ನನ್ನ ಪ್ರಿಯಮಿತ್ರರೇ" ಎಂದು ಪ್ರಾರಂಭಿಸಿ, ಮೂವತ್ತೈದು ವರುಷಗಳ ಹಿಂದಿನ ದಿನಗಳನ್ನು ನೆನಪಿಸಿದೆ. ಆಗ ಬೆಂಗಳೂರಿನಲ್ಲಿ ಜಟಕಾ ಓಡುತ್ತಿತತ್ತು. ಎಂಟಾಣೆಗೆಲ್ಲ

ನಡಿಯೇ ಅಕ್ಕಿ ಬರುತ್ತಿತ್ತು. ಮೆಜೆಸ್ಟಿಕ್‌ನಲ್ಲಿ ಮೂರೆ ಚಿತ್ರಮಂದಿರಗಳು....ಸಿಮ್ಮಲ್ಲಿ ಹೆಚ್ಚಿನವರು ಇನ್ನೂ ಹುಟ್ಟಿರಲಿಕ್ಕಿಲ್ಲವೆಂದು ಹೇಳಿದೆ. ನನಗಿಂತ ಹಿಂದೆ ಡಿಪಾರ್ಟ್‌ಮೆಂಟನ್ನು ಆಳಿದ ಮಹನೀಯರನ್ನು ನೆನೆದೆ. ಶ್ರದ್ಧೆ ಭಕ್ತಿ ವಿಶ್ವಾಸಗಳ ಮಹತ್ವವನ್ನು ಬಿಂಬಿಸಿದೆ. ಕೊನೆಯದಾಗಿ ನನ್ನಿಂದ ಏನಾದರೂ ತಪ್ಪುಗಳಾಗಿದ್ದಲ್ಲಿ, ಯಾರನ್ನಾದರೂ ಕಠೋರವಾಗಿ ನಡೆಯಿಸಿಕೊಂಡಿದ್ದಲ್ಲಿ .... ಮನನೋಯಿಸಿದ್ದಲ್ಲಿ ಕ್ಷಮಿಸಬೇಕೆಂದು ಕೇಳಿಕೊಂಡೆ....

ನಾನು ಕೈಜೋಡಿಸಿ ಕ್ಷಮೆ ಕೇಳುತ್ತಿದ್ದಂತೆಯೇ ಎಲ್ಲರ ಕಣ್ಣುಗಳೂ ಹಸಿಗೂಡಿದ್ದವು. ಒಂದಿಬ್ಬರು ಮಹಿಳಾ ಮಣಿಗಳಂತೂ ಕರವಸ್ತ್ರದಿಂದ ಕಣ್ಣೊರಸಿ ಕೊಳ್ಳುತ್ತಿದ್ದರು.

ಅಂತೂ ಸಮಾರಂಭ ಕೊನೆಗೊಂಡಿತು. ಇನ್ನೊಮ್ಮೆ ಮತ್ತೊಮ್ಮೆ ಎಲ್ಲರ ಕೈಕುಲುಕಿ, ಕಿರಿಯರ ಬೆನ್ನು ಸವರಿ, ನಿವೃತ್ತಿಯ ನಂತರ ನನ್ನನ್ನು ಮರೆತುಬಿಡ ಬಾರದೆಂದೂ ಆಗೀಗ ಮನೆಯ ಕಡೆಗೆ ಬರುತ್ತಿರಬೇಕೆಂದೂ ಕಳಕಳಿಯಿಂದ ಕೇಳಿ ಕೊಂಡೆ. ಮತ್ತೊಮ್ಮೆ ಎಲ್ಲರೂ ಕಣ್ಣೊರಸಿಕೊಳ್ಳುತ್ತಿದ್ದಾಗ, ಆಫೀಸಿನ ನನ್ನ ಕೋಣೆಗೆ ಬಂದೆ. ಒಂದೆರಡು ಫಾಯಿಲುಗಳನ್ನು ಆಚೀಚೆ ಸರಿಸುತ್ತಿದ್ದಂತೆಯೇ, ಒಮ್ಮೆಲೇ ವಿದ್ಯುತ್ ಪ್ರವಾಹ ನಿಂತು ದೀಪಗಳೆಲ್ಲ ನಂದಿ ಗಾಢಾಂಧಕಾರವೇ ಆವರಿಸಿತು.

ಸರಿ ಇನ್ನೇನು ಮನೆಗೆ ಹೊರಡುವಾ ಎಂದು ಹೊರಗೆಬಂದೆ. ಅಲ್ಲೂ ಕತ್ತಲೆಯು. ನನ್ನ ಸಹೋದ್ಯೋಗಿಗಳೆಲ್ಲ ಬಸ್ಸು ಹಿಡಿಯುವ ಆತುರದಲ್ಲಿದ್ದರು. ಮೆಟ್ಟಲಿನ ಮೇಲೆಲ್ಲ ನೂಕುನುಗ್ಗಲು. ಒಬ್ಬರ ಮುಖ ಒಬ್ಬರಿಗೆ ಕಾಣದು. ಮಾತು ನಗೆಗಳ ಅಬ್ಬರ, ಅಟ್ಟಹಾಸ ಮಾತ್ರಾ ಕಿವಿಗಳಿಗೆ ಅಪ್ಪಳಿಸುತ್ತಿತ್ತು.

"ಅಂತೂ ಹೋಯಿತಲ್ಲಪ್ಪ, ಪೀಡೆ, ಮಂದಿಕೋತಿಯ farewellಗೇಂತ ಇಪ್ಪತ್ತೈದು ರೂಪಾಯಿ ದಂಡ ಬೇರೆ" ಸ್ಟೇನೋ ಶೀಲಾಳ ದನಿ.

"ಅಯ್ಯೋ ಹಾಗ್ಯಾಕ್ರೀ ಹೇಳ್ತೀರಾ. ಪಾಪ, ಪೆದ್ದನೇ ಇರಲಿ, ದಡ್ಡನೇ ಇರಲಿ, ಹುಚ್ಚನೇ ಇರಲಿ, ಮನುಷ್ಯ ಒಳ್ಳೆಯವನಿದ್ದ ಪಾಪ" ಜ್ಯೂನಿಯರ್ ಇಂಜಿನಿಯರ್ ಮಲ್ಲಪ್ಪಗೌಡನ ದನಿ.

ಕತ್ತಲಲ್ಲಿ ನಾನು ಭರಭರನೇ ಈಚೆಗೆ ಬಂದೆ. ನನ್ನ ಕಣ್ಣು ತುಂಬಿಬರುತ್ತಿದ್ದವು



# ಚುನಾವಣೆ ! !

— ಆನಂದ್

---

ಮೊನ್ನೆ ಆಫೀಸಿನಿಂದ ಮನೆಗೆ ಬಂದೆ. ಸಂಜೆ ಆರು ಗಂಟೆಗೆ. ಉಸ್ಸಪ್ಪ ಅಂತ ಸೋಫಾಸೀನನಾದೆ. ನನ್ ಮಗ, ಗೋಪಿ ಓಡಿ ಬಂದ. 'ಅಪ್ಪಾ, ಮುಂದಿನ ವಾರ ನಂ ಕ್ಲಾಸಿನಲ್ಲಿ ಮಾನೀಟರ್ ಎಲೆಕ್ಷನ್ನು ! ನಾನೂ ನಿಂತಿದೀನಿ' ಅಂತ ಘೋಷಣೆ ಮಾಡಿದ. ನಿಂಗ್ಯಾಕೋ ಅದೆಲ್ಲ, ತೆಪ್ಪಗೆ ಓದಿಕೊಂಡಿರೋದು ಬಿಟ್ಟು, ಅಂದೆ. 'ಇಲ್ಲ ಅಣ್ಣ, ನಿನಗೆ ಗೊತ್ತಿಲ್ಲ. ಮಾನೀಟರ್ ಆದ್ರೆ ಎಷ್ಟು ಪವರ್ ಇರುತ್ತೆ. ಗೊತ್ತಾ? ' ಅಂದ. ಗೋಪಿ ಅಕ್ಕ ರಮಣಿ ಭರದಳು- "ಏನೋ ಅದು ಪವರ್ರು?' ಅಂದಳು. 'ನೋಡಿ, ನಾನು ಮಾನೀಟರ್ ಆದಶೆ, ಹುಡುಗರಿಗೆಲ್ಲ ಹೆದರಿಸಿ ಇಡಬಹುದು ! ಪಟಿಂಗರೂ ನನ್ನ ಹತ್ರ ನರಿಗಳ ಹಾಗೆ ಮಾತಾಡ್ತಾರೆ ! ಹೋಂ ವರ್ಕ್ ವಿಷಯ ಏನಾರೂ ಕೇಳಬೇಕಾದರೆ ಸಾಕು, ಮುಂದಿನ ಬೆಂಚು ಹುಡುಗರೆಲ್ಲ ಸಾಲಾಗಿ ನಿಲ್ತಾರೆ ನಂಗೆ ಸಹಾಯ ಮಾಡುಕ್ಕೆ ! ತುಂಟರಿಗೆ ನನ್ನ ಕಂಡ್ರೆ ಭಯ. ಅದಕ್ಕೆ ಕಡ್ಲೆ ಕಾಯಿ, ಸೌತೆಕಾಯಿ ಆಗಾಗ ಸಿಗುತ್ತೆ,' ಅಂತೆಲ್ಲ ವಿವರಿಸಿದ.

ಸರಿ ಅಂದೆ, ಇನ್ಯಾರ್ಯಾರು ಇದಾರೆ ನಿನ್ನ ಸ್ಪರ್ಧಿಗಳು? ಅಂದೆ. 'ನಾನು, ರಾಮು, ಇಕ್ಬಾಲ್, ಪಿಳ್ಳೈ ನಾಲ್ಕು ಜನ ನಿಂತಿದೀವಿ ! ಮೇಷ್ಟರಿಗೆ ನಂ ಹೆಸರುಗಳ್ನ ಬರೆದು ಕೊಟ್ಟಿದೀವಿ !' ಅಂದ ಗೋಪಿ, 'ಏನು, ಹುಡುಗರು ಹ್ಯಾಗೆ ನಿರ್ಧರಿಸ್ತಾರೆ, ಯಾರಿಗೆ ಓಟು ಕೊಡಬೇಕು ಅಂತ ?' ಅಂದೆ ಅಮಾಯಕನಂತೆ. ಗೋಪಿ ಹೇಳಿದ : 'ನಂ ಕ್ಲಾಸಿನ ಹುಡುಗರಿಗೆಲ್ಲ ಹೇಳ್ತಿದೀವಿ, ಮೂರು ದಿನದಿಂದ, ನಾನು ಮಾನಿಟರ್ ಆದ್ರೆ ಅವರಿಗೆ ಏನೇನು ಅನುಕೂಲ ಅಂತ. ಮೊನ್ನೆ ಎಲ್ಲರ್ಗೂ ಪೆಪ್ಪರ್‌ಮೆಂಟ್ ಬೇರೆ ಕೊಡಿಸಿದೆ ನನ್ನ ಖರ್ಚಿನಲ್ಲಿ' ಅಂದ. 'ಅದು ತಪ್ಪಲ್ಲವೇನೋ?' ಅಂದೆ 'ಇಲ್ಲ ಅಣ್ಣ, ಪಿಳ್ಳೈ ಎಲ್ಲರ್ಗೂ ಐಸ್ ಕ್ರೀಂ ಕೊಡಿಸ್ದ ! ಅವರ ಚಿಕ್ಕಪ್ಪ ಐಸ್ ಕ್ರೀಂ ಫ್ಯಾಕ್ಟರೀ ಇಟ್ಟಿದಾರೆ !' ಅಂದ ! 'ಕ್ಲಾಸಲ್ಲಿ ಗೋಡೆ ಮೇಲೆ ನಾನು ಕ್ರಿಕೆಟ್ ಆಡ್ತಿರೋ ಚಿತ್ರ ಅಂಟಿಸಿದೀನಿ! ಓಟ್ ಫಾರ್ ಅಂತ ಅದರ ಮೇಲೆ ಬರೆದು! ' ಅಂತಾನೂ ಸೇರಿಸ್ದ

ಎಲೆಕ್ಷನ್ ದಿನ ಹತ್ರ ಬಂತು. ಗೋಪಿ ಮನೇಗೆ ಬರೋದೂ ನಿಧಾನ ಆಗ್ತಾ ಬಂತು, ಅವರ ಅಮ್ಮನಿಗೆ ಭಯ ದಿನಾ! ಅವಳೂ ಪಾಪ ಎಲೆಕ್ಷನ್ ಖರ್ಚಿಗೆ ಅಂತ ಒಂದಷ್ಟು ಸೇವಿಂಗ್ಸ್‌ನ ಕರಗಿಸಿದಳು—ಪುತ್ರ ವ್ಯಾಮೋಹ ! ಎಲೆಕ್ಷನ್‌ಗೆ ಮೂರು ದಿನ ಇರುವಾಗ ಇಕ್ಬಾಲ್‌ಗೆ ಜ್ವರ ಬಂದು ಬಿಡ್ತು. ಕ್ಲಾಸಲ್ಲೆಲ್ಲ ಗಲಾಟೆ. ರಾಮು, ಗೋಪಿ ಇಬ್ರೂ ಸೇರಿ ಇಕ್ಬಾಲ್‌ನ ಕಾಕಾ ಅಂಗಡೀಗೆ ಕರಕೊಂಡು ಹೋಗಿದ್ರು !

ಅಲ್ಲಿ ತಿಂಡಿ ತಿಂದಿದ್ದಕ್ಕೇ ಅವನಿಗೆ ಜ್ವರ ಬಂದದ್ದು ಅಂತ. ಗೋಪಿ, ರಾಮು, ಇಬ್ರೂ ಇದನ್ನ ಬಲವಾಗಿ ನಿರಾಕರಿಸಿದರು ! 'ನಾವು ಹೋಗಿದ್ದು ನಿಜ ! ಆದರೆ ಅವತ್ತು ಬೆಳಿಗ್ಗೇನೇ ಇಕ್ಬಾಲ್ ಮೈ ಕೈ ನೋವು ಅಂತ ಇದ್ದ ! ಬರೀ ಟೀ ಕುಡಿದ ಅಷ್ಟೇ !' ಅಂತ ಅವರ ಹೇಳಿಕೆ. ಈಗ ಕ್ಲಾಸ್ ಮೇಷ್ಟ್ರಿಗೆ ಸಂದಿಗ್ಧ ಪರಿಸ್ಥಿತಿ ! ಉಮೇದುವಾರ ಇಲ್ದೇನೆ ಎಲೆಕ್ಷನ್ ನಡೀಬಹುದೋ ಅಥವಾ ಇಕ್ಬಾಲ್ ಜ್ವರ ಕಮ್ಮಿ ಆಗೋ ತನಕ ಕಾಯಬೇಕೆ? ಹೆಡ್ ಮೇಷ್ಟ್ರು ರೂಲಿಂಗ್ ಮಾಡಿದರು ! ಕಾ ಯ ಬೇ ಕಾ ಗಿ ಲ್ಲ ! ಇಕ್ಬಾಲ್ ಪ್ರತಿನಿಧಿ ಒಬ್ಬ ಓಟು ಕೌಂಟ್ ಮಾಡುವಾಗ ಇದ್ರೆ ಸಾಕು, ಅಂತ. ಸಧ್ಯಕ್ಕೆ ಇಕ್ಬಾಲ್ ಜ್ವರ ಒಂದು ದಿನದಲ್ಲೇ ಬಿಡ್ತು !

ಎಲೆಕ್ಷನ್ ದಿನ ಗುಲ್ಲೋ ಗುಲ್ಲು! ಮೇಷ್ಟ್ರು ಕಟ್ಟಪ್ಪಣೆ ಮಾಡಿದ್ರು,ಅವತ್ತು ಯಾರೂ ಗಲಾಟೆ ಮಾಡಬಾರದು, ಕೂಗಾಡಬಾರದು ಅಂತ. ಓಟಿಂಗ್ ಶಾಂತ ವಾಗಿ ನಡೀತು. ಕ್ಲಾಸ್ ಮೇಷ್ಟ್ರೇ ಖುದ್ದಾಗಿ ನಿಂತು ಮಕ್ಕಳಿಗೆಲ್ಲ ಎಲೆಕ್ಷನ್ ವಿಚಾರ ಹೇಳಿದ್ರು! ಮತಗಳ ಎಣಿಕೆ ಶುರುವಾಯ್ತು. ಅಭ್ಯರ್ಥಿಗಳೆಲ್ಲ ಚಡಪಡಿಸ್ತ ಕೂತಿದಾರೆ! ಓಟುಗಳ ಎಣಿಕೆ ಮುಗಿದಾಗ ಫಲಿತಾಂಶ ಹೀಗಿತ್ತು.

ಒಟ್ಟು ಮತದಾರರು—80

ಗೋಪಿ — 20

ರಾಮು — 20

ಇಕ್ಬಾಲ್ — 20

ಪಿಳ್ಳೆ — 20

ಮೇಷ್ಟ್ರು ತಲೇ ಮೇಲೆ ಕೈ ಹೊತ್ತು ಕೂತರು! ತಿರುಗೀ ಎಲೆಕ್ಷನ್ ಆಗ ಬೇಕು ಅಂತ ನಿಟ್ಟುಸಿರು ಬಿಟ್ಟರು. ಇಂತಹ ಪರಿಸ್ಥಿತಿ ನ ಭೂ(ಬೂ)ತೋ ನ ಭವಿಷ್ಯತಿ! ದೇವರ ದಯೆಯಿಂದ ಅಷ್ಟು ಹೊತ್ತಿಗೆ ಹೆಡ್ ಮೇಷ್ಟ್ರು ಬಂದರು. ಅವರ ರೂಲಿಂಗ್ ಪ್ರಕಾರ, ಮಿಕ್ಕ ಮೂವರು ಅಭ್ಯರ್ಥಿಗಳು ಒಪ್ಪಿದರೆ, ಉಳಿದ ವನು ಮಾನೀಟರ್ ಆಗಬಹುದು! ಸರಿ, ನಾಲ್ಕು ಜನರೂ ಬಿಸಿ ಚರ್ಚೆ ನಡೆಸಿದರು!

ಕೊನೆಗೆ ಫಲಿತಾಂಶ ಹೊರಬಿತ್ತು! ರಾಮು ಕ್ಲಾಸ್ ಮಾನೀಟರ್! ಇತರರು ತಮ್ಮ ಸಹಕಾರ ಕೊಡ್ತೀವಿ ಅಂತ ಮಾತು ಕೊಟ್ರು!

ಕ್ಲಾಸ್ ಮೇಷ್ಟ್ರು, ಎಲೆಕ್ಷನ್ ಅಂದ್ರೆ ಹೀಗಿರಬೇಕು ! ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು ಅಲ್ವೇನ್ರೋ ಅಂದರು. ಇಂದಿನ ರಾಜಕೀಯದ ಪರಿಸ್ಥಿತಿ ನೋಡಿದ್ರೆ, 'ಹಿಂದಿನ ಮಕ್ಕಳು' ಹ್ಯಾಗಿದ್ರೋ ಅನ್ನಿಸುತ್ತೆ!

# ಬಜೆಟ್, ಉಗ್ರವಾದಿ, ಇತ್ಯಾದಿ

—ಶಿವು

---

ಬಜೆಟ್ ಮಂಡನೆಯ ಮೂರನೆಯ ಸಂಜೆ. ಕ್ಲಬ್ಬಿನ ಬಾರಿನಲ್ಲಿ ಬಿಸಿ ಬಿಸಿ ಚರ್ಚೆ.

"ಪೆಟ್ರೋಲ್ ಬೆಲೆ ಏರಿಸ್ಬಿಟ್ರು, ರೇಷನ್ ಬೇರೇ ಮಾಡ್ತಾರಂತಲ್ಲಾ, ಇಪ್ಪತ್ತೊಂದನೆಯ ಶತಮಾನಕ್ಕೆ ಎತ್ತಿನ ಗಾಡೀಲಿ ಹೋಗ್ಬೇಕಂತೇನು?'' ಅರುಣ ಕೇಳಿದ.

"ಮುಂದಿನ ವರ್ಷದ ಬಜೆಟ್‌ನಲ್ಲಿ ದನದ ಮೇವು, ಹಿಂಡಿಗಳ ಮೇಲೂ ತೆರಿಗೆ ವಿಧಿಸ್ತಾರಂತೆ'' ಮಾಧು ಕಂಹಕ ನುಡಿದ.

"ಅಲ್ಲಾ ನಮ್ಮ ದೇಶಕ್ಕೆ ಏನು ಗತಿ ಬಂತು ಅಂತೀನಿ. ಕಾಶ್ಮೀರದಲ್ಲಿ ನೋಡಿದ್ರೆ ಉಗ್ರವಾದಿಗಳು. ಪಂಜಾಬಿನಲ್ಲಿ ಖಾಲಿಸ್ತಾನಿಗಳ ಹಾವಳಿ. ಅಸ್ಸಾಮಿನಲ್ಲಿ ಅಲ್ಫದವರ· ಬೊಬ್ಬೆ. ಶ್ರೀಲಂಕಾದಿಂದ ಬೇರೆ ಉಗಿದು ಅಟ್ಟಿದ್ದಾರೆ. ಪೆಟ್ರೋಲು, ಅಂಚೆ, ರೈಲು ಇಂಥ ಜನಸಾಮಾನ್ಯರ ಬಳಕೆ ಬಾಬ್ತುಗಳನ್ನೇ ದುಬಾರಿ ಮಾಡಿ ಜನರ ಬೆನ್ನು ಮೂಳೆ ಮುರೀತಿದಾರೆ. ಈ ಸರ್ಕಾರ ಏನು ಮಾಡ್ತಾ ಇದೆ? ಯಾವ ದಿಕ್ಕಿನಲ್ಲಿ ಹೋಗ್ತಾ ಇದೆ ? ಅಥವಾ ಏಸು ಕ್ರಿಸ್ತ ಹೇಳಿದ ಹಾಗೆ 'ಅವರೇನು ಮಾಡುತ್ತಿದ್ದಾರೆಂದು ಅವರೇ ತಿಳಿಯರು. ತಂದೆಯೇ ಅವರನ್ನು ಕ್ಷಮಿಸು' ಅನ್ಬೇಕೋ?'' ಸತೀಶ ಒಂದು ಪುಟ್ಟ ರಾಜಕೀಯ ಭಾಷಣ ಮಾಡಿ ಮುಗಿಸೋ ಹೊತ್ತಿಗೆ ದೇವಾನಂದಾನಿ ಒಳಕ್ಕೆ ಬಂದ.

ದೇವು (ಪಗಡೆ ಆಟ-೧೯೮೯ನೆಯ ಅಕ್ಟೋಬರ್ ಅಪರಂಜಿ) ನಿಮಗೆಲ್ಲಾ ಗೊತ್ತಿರೋಹಾಗೆ ಸ್ಕ್ರಿಪ್ಟ್‌ರೈಟರ್. ಮುಕ್ಕಾಲು ಪಾಲು ಕನ್ನಡಚಿತ್ರಗಳಿಗೆ ಅವನದ್ದೇ ಚಿತ್ರಕಥೆ, ಸಂಭಾಷಣೆ. ಬಾರ್‌ನ ಲೀಡರ್. ಅದಕ್ಕೇ ಅವ ಒಳಗೆ ಬಂದ್ರೆ ಬಾರ್‌ನಲ್ಲಿ ಅವನಿಗೇ ಅಗ್ರ ಪೂಜೆ.

"ಮಹಾತ್ಮಾ ಏಸು ಕ್ರಿಸ್ತನ ಪುಣ್ಯ ನಾಮ, ಸ್ಕ್ರುಟಿನಿ ಕೇಸ್‌ನಲ್ಲಿ ಸಿಕ್ಕಿ

ಬಿಟ್ಟ ಸತೀಶನ ಬಾಯಲ್ಲಿ. ರಾಮ ರಾಮ ! ಅಥವಾ ಮೇರಿ, ಮೇರಿ ! ಸತೀಶ, ನಿನ್ನ ಹತಾಶ ಭಾವನೆ ನನಗೆ ಸುತರಾಂ ಒಪ್ಪಿಗೆ ಇಲ್ಲ. ನಮ್ಮ ರಾಜಾ ಸಾಹೇಬರು ಏನು ಮಾಡಿದ್ರೂ ದೂರ ದೃಷ್ಟಿಯಿಂದ್ಲೇ ಮಾಡ್ತಿದಾರೆ. ಜೋಸೆಫ್, ಇಲ್ಲೀ ತಂದ್ಬಿಡು ಅದನ್ನ.''

ಜೋಸೆಫ್, ದೇವೂಗೆ ಖಾಸಾ ಬೇರರ್. ಒಂದು ತಟ್ಟೆ ರಾಜಾ ಮಸಾಲಾ, ಒಂದು ಡ್ರಾಫ್ಟ್ ಬೀರ್ ದೇವೂ ಮುಂದೆ ಪ್ರತ್ಯಕ್ಷ.

"ದೇವೂ, ನೀನು ಸಿನಿಮಾ ತಾರೆಯರ ಬಾಯಲ್ಲಿ ಏನು ಬೇಕಾದ್ರೂ ಹೇಳಿಸಬಲ್ಲೆ, ಒಪ್ಕೋತೀನಿ. ಆದ್ರೆ ನಿನ್ನೆ ಹೊರಬಿದ್ದ ಬಜೆಟ್ ದೇಶಕ್ಕೆ ಒಳ್ಳೇದು ಅನ್ನೋದನ್ನ ನಾನು ಒಪ್ಲಾರೆ. ಹೇಳಿ ಕೇಳಿ ನಾನು ರೀಡರ್ ಇನ್ ಎಕನಾಮಿಕ್ಸ್. ತಿಳ್ಕೊ" ರವಿ ರೆಡ್ಡಿ ಸ್ವಲ್ಪ ಗಂಭೀರವಾಗೇ ಹೇಳಿದ.

"ಲೋ, ರವಿ, ಸ್ವಲ್ಪ ತಡ್ಕೊ. ಮಹಾ ಎಕಾನಮಿಸ್ಟ್ ಇವ್ನ. ನಮ್ಮ ದೇಶದ ಮುಂದೆ ಇರೋ ಸಮಸ್ಯೆಗಳಿಗೆ ಎಕನಾಮಿಕ್ಸ್ ಪರಿಹಾರ ಇಲ್ಲ ಗುರೂ. ಇದಕ್ಕೆ ಬೇಕಾಗಿರೋದು **hlistoric solution** ನ್ನ.

ಈಗ್ನೋಡು. ನಮ್ಮ ದೇಶದ ಮುಂದಿರೋ ಜ್ವಲಂತ ಪ್ರಶ್ನೆ ಅಂದ್ರೆ ಉಗ್ರವಾದಿಗಳದ್ದು. ಪಂಜಾಬ್‌ನಲ್ಲಾಗ್ಲೀ, ಕಾಶ್ಮೀರದಲ್ಲಾಗ್ಲೀ ಅವರ್ದೇ ಗಲಾಟೆ. ಉಗ್ರವಾದಿಗಳ **modus operandi** ಗೊತ್ತಲ್ಲ. ಒಂದು ಜೀಪಿನಲ್ಲಿ ನಾಲ್ಕೈದು ಜನ ಸ್ಟೆನ್ ಗನ್ನ್ ತೊಗೊಂಡು ಮಾರ್ಕೆಟ್ ಚೌಕಕ್ಕೆ ಬರೋದು. ಜನಸಂದಣಿ ಮೇಲೆ ಯದ್ವಾ ತದ್ವಾ ಗುಂಡು ಹಾರಿಸಿ, ಅದೇ ಜೀಪಿನಲ್ಲೇ ತಪ್ಪಿಸ್ಕೊಂಡು ಹೊರಟು ಹೋಗೋದು. ಅಥವಾ ಇಬ್ಬರು ಉಗ್ರವಾದಿಗಳು ಮೋಟರ್ ಸೈಕಲ್ ಮೇಲೆ ಬಂದು, ಗುಂಡು ಹಾರಿಸಿ, ಸರ್ರ್ ಅಂತ ತಪ್ಪಿಸಿಕೊಂಡು ಹೋಗೋದು. ಇದನ್ನೆಲ್ಲಾ ಹೇಗೆ ತಪ್ಪಿಸೋದು? ಉಗ್ರವಾದಿಗಳು ತಪ್ಪಿಸ್ಕೊಂಡು ಹೋಗುಕ್ಕೆ ಆಗದೇ ಇದ್ರೆ ಅವರು ಗುಂಡು ಹಾರಿಸೋ ಸಾಹಸ ಮಾಡುಲ್ಲ. ಜೀಪಿಗೆ ಮುಖ್ಯವಾಗಿ ಬೇಕಾದದ್ದು ಏನು? ಪೆಟ್ರೋಲ್. ಅದನ್ನೇ ದುಬಾರಿ ಮಾಡಿ, ರೇಷನ್ ಮಾಡಿದ್ರೆ ಟೆರರಿಸ್ಟ್‌ಗಳನ್ನ ಹಿಡಿಯೋದು ಬಲು ಸುಲಭ. ನಾಲ್ಕು ಜನ ಗನ್ ಹಿಡ್ಕೊಂಡು ಪೆಟ್ರೋಲ್ ರೇಷನ್ ಕ್ಯೂನಲ್ಲಿ ನಿಂತಿದ್ರೆ ಹಿಂದಿನಿಂದ ಬಂದು

ಗಪ್ ಅಂತ ಹಿಡ್ಕೊಂಡ್ಬಿಟ್ರೆ ಆಯ್ತು.

ಇನ್ನೊಂದು ವಿಷ್ಯ. ನಿರುದ್ಯೋಗಿ ಯುವಕರೇ ಉಗ್ರವಾದಿಗಳಾಗ್ತಾರೆ ಅನ್ನೋದು, ಎಲ್ಲಾರಿಗೂ ಗೊತ್ತಿರೋದೇ. ನಿರುದ್ಯೋಗಿ ಯುವಕರ first love ಅಂದ್ರೆ ಮನರಂಜನೆ. ಕೆಂಪೇಗೌಡ ರಸ್ತೆಯ ಥಿಯೇಟರುಗಳ ಕ್ಯೂ ನೋಡಿದ್ರೆ ತಿಳಿಯುತ್ತೆ ಈ ಸತ್ಯ. ಒಳ್ಳೇ ಸಿನಿಮಾಗಳಿಗೂ ನಿರುದ್ಯೋಗಿಗಳಿಗೂ ಹತ್ತಿರದ ನಂಟು. ಒಳ್ಳೇ ಸಿನಿಮಾಗಳೇ ಕಡಿಮೆ ಆದ್ರೆ ಯುವಕರು ರೊಚ್ಚಿಗೆದ್ದು ಉಗ್ರವಾದಿಗಳಾಗೋದು ಸಹಜ. ಈ ಬಗ್ಗೆ ನಮ್ಮ ದಂಡವತೆ ಸಾಹೇಬ್ರ ಯುಕ್ತಿ ನೋಡಿ. ಸಿನಿಮಾ ಪ್ರಿಂಟ್‌ಗಳ ಮೇಲಿನ ಅಬ್ಕಾರಿ ಸುಂಕನ ತೆಗೆದು ಹಾಕಿ, ಪಂಜಾಬಿನ ಥಿಯೇಟರುಗಳಿಗೆಲ್ಲಾ ಪ್ರಿಂಟುಗಳು ಹೇರಳವಾಗಿ ದೊರೆಯೋ ಹಾಗೆ ಮಾಡಿದ್ದಾರೆ. ಇನ್ನು ಉಗ್ರವಾದಿಗಳ sourceಗೇ ಬಿತ್ತಲ್ಲ ಏಟು.

ನಿರುದ್ಯೋಗ ಸಮಸ್ಯೆಗೆ ಎಕನಾಮಿಕ್ ಪರಿಹಾರ ಇಲ್ಲ ಅಂದೆ. ವಿವರಿಸ್ತೇನೆ ಕೇಳಿ. ದೇಶದ ಅಸಂಖ್ಯಾತ ನಿರುದ್ಯೋಗಿಗಳಿಗೆ ಬಂಡವಾಳ ಹಾಕಿ ಕಾರ್ಖಾನೆ ಸ್ಥಾಪಿಸಿ ಕೆಲಸ ಕೊಡೋದು ನಮ್ಮ ಬಡ ದೇಶಕ್ಕೆ ಆಗದ ಮಾತು. ಆದ್ರೆ ಕೆಲಸ ಯಾಕೆ ಬೇಕು? ಮುಖ್ಯವಾಗಿ ಬೇಕಾಗೋದು ಎರಡು ಹೊತ್ತು ಊಟ ತಾನೆ? ದೇಶದಲ್ಲೆಲ್ಲಾ ಅನ್ನಛತ್ರಗಳನ್ನ ಕಟ್ಟಿಬಿಟ್ರೆ, ಕಡಿಮೆ ಖರ್ಚಿನಲ್ಲಿ ಸಮಸ್ಯೆನ ಬಗೆಹರಿಸಬಹುದು. ಇನ್ನು ಬೇಕಾದದ್ದು shelter ಅಥವಾ ನೆರಳು. ಕೋಟ್ಯಾಂತರ ಜನರಿಗೆ ಮನೆ ಕಟ್ಟಿಸೋ ಬದಲು, ದೇಶದ ರಸ್ತೆಗಳಲ್ಲೆಲ್ಲಾ ಸಾಲುಮರಗಳನ್ನ ನೆಡೆಸಿದ್ರೆ ಎಲ್ಲರಿಗೂ ಬೇಕಾಗೋ ಅಷ್ಟು ನೆರಳು ತಾನಾಗೇ ಸಿಗುತ್ತೆ.

ಅದಕ್ಕೇ ನಾನು ಹೇಳಿದ್ದು historic solution ಬೇಕು ಅಂತ. ನಮ್ಮ ದೇಶದ ಚರಿತ್ರೆ ನೋಡಿದ್ರೆ, ಚಕ್ರವರ್ತಿ ಅಶೋಕನಿಂದ ಹಿಡಿದು ಪಾಳೇಗಾರ ಮಾರ ನಾಯಕನವರೆಗೂ, ಯಾವರಾಜ, ಮಹಾಜರೆಲ್ಲ ಸಾಲುಮರಗಳನ್ನ ನೆಡೆಸಿದರು, ಅನ್ನಛತ್ರ ಕಟ್ಟಿಸಿದರು, ಕಾಲುವೆಗಳನ್ನ ತೋಡಿಸಿದರು ಅಂತ; ಮೇಲಿಂದ ಮೇಲೆ ಅವರ economic strategy ಸ್ಪಷ್ಟವಾಗಿ ಕಂಡುಬರುತ್ತೆ. ನಾವು ಮರೆತಿದ್ವಿ. ಈಗ ನಮ್ಮ ಘನ ಸರ್ಕಾರದೋರು ಒಂದೊಂದಾಗಿ ಜಾರಿಗೆ ತರ್‍ತಿದಾರೆ ಅಷ್ಟೆ. ಪೆಟ್ರೋಲ್ ರೇಷನ್, ಸಿನಿಮಾ, ಅಬ್ಕಾರಿ ರಿಯಾಯಿತಿ ಕೇವಲ ಮೊದಲ ಹಂತಗಳು. ಸಾಲುಮರ, ಅನ್ನಛತ್ರ ಮುಂಬರುವ ಆಕರ್ಷಣೆಗಳು. ಯಾಕೆ ಹೇಳುಕ್ಕೆ ಬಂದೆ ಅಂದ್ರೆ, ಟೆರರಿಸ್ಟ್ ಅಂದ್ರೆ ಸಹಾನುಭೂತಿ ಇರಬೇಕು ಕಣ್ರೋ, ಹೆದರ್‍ಕೊ

ಬಾರ್ದರ್ಲ್........"

"ಢಂ" ಅಂತ ಶಬ್ದ ಕೇಳಿಸಿತು.

ದೇವೂ ಬೆದರಿ, ಬೆಚ್ಚಿಬಿದ್ದು ಹಿಂದೆ ನೋಡಿದ. ಹಿಡಿದ ಶಾಂಪೇನ್ ಬಾಟಲಿನ ಕಾರ್ಕನ್ನು ಜೋಸೆಫ್ ಬಗ್ಗಿ ತೆಗೆಯುತ್ತಿದ್ದ.

ದೇವು ಹೇಳಿದ historic solutionನ್ನು ಮೆಲುಕುತ್ತಾ ನಾನು ಮನೆಗೆ ನಡೆದೆ.



ಬೆಳ್ಗೆ ಬೆಳೀತು ಅಕಾಶ್ದೆತ್ರ
ಒಂದು ತೆಂಗಿನ್ ಮರ
ಸೂರ್ಯನ್ ಹತ್ರ ಮುಟ್ಟದ್ಕೂಡ್ಲೆ
ಉರೀತ್ ಪರಾಪರ
ಅದ್ರ ಬೂದೀನ್ ತುಂಬ್ಕೊಂದಜ್ಜ
ನೂರು ಸಂವತ್ಸರ
ಅಜ್ಜೀಗ್ ಹೇಳ್ತು ತೆಂಗಿನ್ಮರ
'ಬೇಡ್ಕೊ ನೀನೊಂದ್ ವರ'
ಅಜ್ಜಿ ಅಂದ್ಳು 'ಮುಂದಿನ್ ಜನ್ಮ
ನಾ ವಧುವಾಗ್ಲಿ, ನೀನ್ ವರ'

—ಸುಮವೇಂದ್ರ ನಾಡಿಗ್

# ಅನಿಸಿಕೆಗಳು

—ಕುಮಾರ ಚಲ್ಯ

---

೧

ಗಂಭೀರ ಪದ್ಯ ಬರೆಯುವುದೆಂದರೆ
ವೃದ್ಧ ಮೌನದಲೇ ನುಡಿದಂತೆ.
ವಿನೋದ ಪದ್ಯ ಬರೆಯುವುದೆಂದರೆ
ಮೊದಲ ರಾತ್ರಿ ಕಳೆದ
ವಧು-ವರ
ನೋಡಿ ನಕ್ಕಂತೆ
ಪರಸ್ಪರ!

೨

ಮಹಾಜನರೇ....
ಎನ್ನುತ್ತಾರಲ್ಲ
ಮಂತ್ರಿಗಳು ಭಾಷಣ ಮಾಡಂತ್ತ
ಏಕೆ?
'ಜನ' ಎಂಬ ಶಬ್ದ
ನಪುಂಸಕಲಿಂಗ-ಅದಕ್ಕೆ

೩

ಉದಾರವಾದಿ
ಎಂದರೆ
'ಉಡದಾರ' ದಲ್ಲಿ
ಡ
ಕಳಕೊಂಡು
ಕೌಪೀನ ಕಟ್ಕೋಕೂ
ದಾರವಿಲ್ದೆ
ಬೆತ್ತಲಾದವ.

೪

ಇವನಾರವ
ಇವನಾರವ
ಇವ-
ನಮ್ಮವ ಕಪಿ.

ಇವನಾರವ
ಇವನಾರವ
ಇವನವರವ-
ಕಪಿ.

ಇವನಾರವ
ಇವನಾರವ
ಇವ-
ನಮ್ಮವ,
ಇವ-
ನಮ್ಮವ,
ಇವನವರವ
ಎನ್ನದ-ನಾನಂ : ಪಿಕೆ

೫

ಲೇ
ಹುಡುಗಿ-
ಕಣ್ಣಲ್ಲಿ ನನ್ನನ್ನು
“ಕ್ಲಿಕ್”ಇಸು
ಅಂದರೆ
ಕಾಲಲ್ಲಿ ನಿನ್ನ
“ಕಿಕ್” ಇಸುತ್ತೇನೆ ಅಂದಳು.

# ಶರೀಫ-ಗೀತೆ

—ಕೆ. ಎನ್. ನಾಗರಾಜ್

---

ನಿನ್ನ ಗದ್ದುಗೆ ಮೇಲೆ ನಿತ್ಯ ಮಲ್ಲಿಗೆ ಮೊಗ್ಗು.
ಹಗಲು ತಣ್ಣನೆ ನೆರಳು ; ಹಕ್ಕಿ ಹಾಡು.
ನಿನ್ನ ಹಾದಿಗೆ ಹೂವು ಚೆಲ್ಲಿತಮರಾವತಿಯು
ಪಾರಿಜಾತದ ಘಮಲು-ಹೆಜ್ಜೆ ಪಾಡು.

ಗೋವಿಂದ ಗುರುಪಾದ ಹರಸಿದಾಶೀರ್ವಾದ
ಎಡಕೆ ಖಾದರಲಿಂಗ ಬಲಕೆ ಜನಿವಾರ.
ಮೊಹರಮ್ಮಿನುರುಸು ರಮಜಾನ ಚಂದ್ರನ ಜತೆಗೆ
ರಾಮನವಮಿಯು ಭಜನೆ ಪೂಜೆ ಪನಿವಾರ.

ಗಿಡಗುಡ್ಡ ತಿರುಗುತಿಹ ಕಾಡು ಕುದುರೆಯನೇರಿ
ಏನು ಸುಖ ಪಟ್ಟಳೋ ಫಾತಿಮಾ ಬೀ?
ಎಲ್ಲರಂಥವನಲ್ಲದಂಥ ಪುರುಷನ ಕೂಡಿ
ಹೊತ್ತಿ ಉರಿದಿರಬಹುದು ಎದೆ ಅಲಾಬಿ.

ಕಾರಡಗಿ ಕತ್ತಲಲಿ ಹೆಡೆ ಬಿಟ್ಟ ಹಾವನ್ನ
ಕುಣಿಸಿ ಮಣಿಸಿದ ಸಾಲಿಗುಡಿ ಮಾಸ್ತರ.
ಗುರುಪದಕೆ ಹಚ್ಚಿ ಹಣೆ ಮಾತ್ತೆ ಕಲಿತಿದ್ದೇನು?
ಅರ್ಧಮಾತ್ರೆಯು ಸಹಿತ ಮೂರಕ್ಷರ.

ಶಿಶುನಾಳಧೀಶನೆದೆ ಸೊದೆಯುಂಡ ಗಂಡು ಮಗ
ಅಭ್ಯಾಸಿ, ಉಪವಾಸಿ ಉಂಡು ಬಳಸಿ.
ಚೆಲ್ಲಿದಲಿಗರಿ ನಡುವೆ ಅರಳಿ ಬೆಡಗಿನ ಬಳ್ಳಿ
ಕಂಪು ಸೂಸಿದ ಬಗೆಯು ಶುದ್ಧ ದೇಸಿ.

ಗುರು ಕರದಿ ತೋರಿಸುವ ಶಿರದಲ್ಲಿ ಹೊತ್ತಲೆದ
ಗರಡಿ ಸಾಧನೆ ಜಗಕೆ ತಿಳಿಯಲಿಲ್ಲ.
ಆ ಅಯೋಧ್ಯೆ ಸೆರಗಿನಲ್ಲಿ ಕಟ್ಟಿದೆ ಕೆಂಡ;
ಆಸ್ಫೋಟಕೇನು ಬಲಿ-ಯಾವ ಬಲ್ಲ?

ಧನ್ಯ ನೀ ಕವಿ ಸಂತ, ಕನ್ನಡದ ಕಬೀರ,
ತತ್ವಲೋಕದ ಖಲೀಫ ಓ ಶರೀಫ!
ವರಕವಿಯು ಮುಂದೆ ನರಕವಿಯು ನರಿಯಾಳೆ?
ನಿನ್ನ ಬಣ್ಣಿಸಲಳವೆ-ಈ ಬೇವಕೂಫ?

---

## ಒಗಟಿನ ಹಾಡು

(ಬಲಿತವರಿಗೆ ಮಾತ್ರ)

—ಹಾ. ಮ್ಯಾ. ಸೂರಿ

---

ಕೌಶಲದ ಹಾಡನು ನಾ ಓದುವೆನು ಕೇಳು
ಕನ್ನಡದ ಜಾಣ ಮರಿ ನೀ ತಿಳಿದು ಹೇಳು.

ನಾಲ್ಕು ಕಾಲುಂಟು ಪ್ರಾಣಿ ನಾನಲ್ಲ
ಬೆನ್ನುಂಟು ಹೊಟ್ಟೆಯೇ ಇಲ್ಲ
ಧಿಮಾಕಿನಲಿ ನನ ಮೇಲೆ ಕೂರುವರು ಎಲ್ಲ
ಬುದ್ಧಿವಂತರು ನೀವು ಇದು ಏನು ಹೇಳಿ.

ನೀ ಹೇಳಿದಾ ಬೆಡಗು "ಕುರ್ಚಿ" ಕಾಣಣ್ಣಾ
ನಾನೊಂದು ಬೆಡಗ ಹೇಳುವೆನು ಕೇಳಣ್ಣ

ತೋಳುಂಟು ಕಾಲಿಲ್ಲ ಶಿರಹರಿದ ಮುಂಡ
ಮೈಯೊಳಗೆ ಅಲ್ಲಲ್ಲಿ ಪನ್ನೀರ ಹೊಂಡ
ಮೆಲ್ಲನೆ ಬಂದು ಹೆಂಗಳೆಯುರನಪ್ಪಿಕೊಂಡ
ಕಾಮುನರಗಿಣಿ ತಾ ಬಲು ಪ್ರಚಂಡ!

ನೀ ಹೇಳಿದಾ ಬೆಡಗು "ರವಿಕೆ" ಕಾಣಣ್ಣ.
ಇದ ನೋಡದಾ ರಸಿಕರನು ನಾ ಕಾಣೆನಣ್ಣ!

# ಸುಲ್ತಾನನ ಕರವಾಳ

— ಚಂಬಾ

---

ಭಗವಾನ್ ಗಿದ್ವಾನಿ ಬರೆದ 'ಟಿಪ್ಪೂ ಸುಲ್ತಾನನ ಖಡ್ಗ' ಕಾದಂಬರಿ ಆಧಾರಿತ ಟಿವಿ ಸೀರಿಯಲ್ ಇಷ್ಟರಲ್ಲಾಗಲೇ ಪ್ರಸಾರವಾಗಬೇಕಾಗಿತ್ತು. ವಿವಾದದ ಸುಳಿಯಲ್ಲಿ ಸಿಕ್ಕಿರುವ ಆ ಸಾಹಿತ್ಯ ಕೃತಿಯನ್ನು ನೋಡಲು ಆಗದಿದ್ದರೇನಂತೆ, ಕನ್ನಡ ದಲ್ಲಿ ಈಚೆಗೆ ಟಿಪ್ಪೂ ಜೀವನವನ್ನು ಆಧರಿಸಿ ಕೆಲವು ಕಾದಂಬರಿಗಳು ಪ್ರಕಟವಾಗಿವೆ. ಇವುಗಳನ್ನು ಓದಿ ನೀವು ತೃಪ್ತಿಪಡಬಹುದು. ತಮ್ಮ ಅನುಕೂಲಕ್ಕಾಗಿ ಈ ಕಾದಂಬರಿಗಳ ಕಿರು ಪರಿಚಯ ಮಾಡಿಕೊಡುತ್ತಿದ್ದೇವೆ.

'ಹರಕಲು ಚೆಡ್ಡಿ'....ದಲಿತ ಸಾಹಿತಿ ಚಿಂದಯ್ಯನವರ ಚೊಚ್ಚಲು ಕೃತಿ.ಟಿಪ್ಪೂ ಸುಲ್ತಾನನ ಜೀವನಕ್ಕೆ ಅದು ಸಂಬಂಧಿಸಿದ್ದರೂ, ಸಾಹಿತಿಯ ಗಮನ ಮುಖ್ಯವಾಗಿ ಟಿಪ್ಪೂ ತಂದೆಯ ಬಾಲ್ಯ, ಅಲ್ಲಿನ ಬಡತನ, ಈ ಬಡತನದ ಬೇಗೆಯಲ್ಲಿ ಹರಕಲು ಚೆಡ್ಡಿ ಹಾಕಿಕೊಂಡಿದ್ದಾಗ ಅವರಿಗಾದ ಅವಮಾನ, ಅವರ ಬಗೆಗೆ ಸುತ್ತಲಿನ ಸಮಾಜದ ಕ್ರೂರ ನಿರ್ಲಕ್ಷ್ಯ ಇವುಗಳತ್ತ ಇದೆ. ಶ್ರೀರಂಗಪಟ್ಟಣದ ಸುತ್ತಮುತ್ತಿನ ಗ್ರಾಮ್ಯ ಭಾಷೆಯ ಮಣ್ಣಿನ ವಾಸನೆ ಪುಟಪುಟಗಳಲ್ಲೂ ನಿಮ್ಮ ಮೂಗನ್ನು ತುಂಬುತ್ತದೆ.

'ಒಂದು ಕೊಡ ರಕ್ತ'.... ಈಗಾಗಲೇ 'ಮೂರು ಹನಿ ನೆತ್ತರು' ಸಣ್ಣ....ಕತೆ, 'ಬಟ್ಟಲು ತುಂಬಾ ರಗುತ' ನಾಟಕ, 'ನೆತ್ತರ ಹೊಳೆ' ಕವನ ಸಂಕಲನ ಪ್ರಕಟಿಸಿರುವ ಬಂಡಾಯ ಸಾಹಿತಿ ಕ್ರಾಂತಿಕುಮಾರರ ಹೊಚ್ಚ ಹೊಸ ಕಾದಂಬರಿ. ಮುಖ್ಯವಾಗಿ ಟಿಪ್ಪೂ ಸುಲ್ತಾನನ ಕತ್ತಿ, ವೈರಿಗಳ ರಕ್ತ ಹರಿಸುವುದಕ್ಕಿಂತ ಉಳ್ಳವರ ರಕ್ತ ಹರಿಸಲು ಪ್ರಯತ್ನಿಸಿತ್ತು, ಟಿಪ್ಪೂಸುಲ್ತಾನನಿಗೆ ನೆಲದ ದಾಹವಿರಲಿಲ್ಲ. ಶೋಷಕರ ವಿರುದ್ಧ ಸೇಡಿತ್ತು ಎನ್ನುವುದನ್ನು ಲೇಖಕರು ಪ್ರಭಾವಶಾಲಿಯಾಗಿ ಚಿತ್ರಿಸಿದ್ದಾರೆ. ಮೂರು ಹನಿಯಿಂದ ಬಟ್ಟಲು ಅಲ್ಲಿಂದ ಹೊಳೆ ಈ ರೀತಿ ಪ್ರಗತಿ ತೋರಿಸಿದ್ದ ಲೇಖಕರ್ರು ಈಗ ಕೊಡಕ್ಕೆ ಬಂದಿದ್ದು ಒಂದು ರೀತಿಯಲ್ಲಿ ಹಿಂಜರಿತವಲ್ಲವೇ ಎಂದು ಕೆಲವರಿಗೆ ಅನುಮಾನವಿರಬಹುದು. ಆದರೆ ಕ್ರಾಂತಿ ಮತ್ತು ಅದಕ್ಕೆ ಅನಿವಾರ್ಯವಾದ ರಕ್ತದ ಓಕುಳಿ ಲೇಖಕರ ಮೂಲ ಕಾಳಜಿ. ಈ ಮೂಲಭೂತ ಉದ್ದೇಶವನ್ನು ಅವರು ಒಂದು ಕ್ಷಣವೂ ಮರೆಯುವುದಿಲ್ಲ ಎನ್ನುವುದಕ್ಕೆ ಈ ಕಾದಂಬರಿ ಪುಟಪುಟಗಳಲ್ಲೂ ಸಾಕ್ಷಿ ಒದಗಿಸುತ್ತದೆ.

'ಕತ್ತಿ ಮತ್ತು ವೃತ್ತ' ಅನಿರ್ಥಾರ ಅವರ ಪ್ರತೀಕಾತ್ಮಕ ಕಾದಂಬ . ಇಲ್ಲಿ ಕತ್ತಿ ವೈರಿಗಳ ತಲೆ ತರಿಯುವ ಆಯುಧವಲ್ಲ-ಒಂದು ಜೀವನ ರೀತಿಗೆ, ಒಂದು ಮನೋಭಾವಕ್ಕೆ ಪ್ರತೀಕ. ವೃತ್ತ ಯಾವುದಕ್ಕೆ ಪ್ರತೀಕ ಎಂದು ಈ ಚಿಕ್ಕ ಪರಿಚಯದಲ್ಲಿ ಹೇಳುವುದಕ್ಕೆ ಸ್ಥಳಾವಕಾಶವಿಲ್ಲ. ಟಿಪ್ಪೂ ಸುಲ್ತಾನ ರಣರಂಗದಲ್ಲಿ ಮಲಗಿರುವಾಗ ಅವನಿಗೆ ಬರುವ ಯೋಚನೆಗಳನ್ನು ಲೇಖಕರು ಪ್ರಜ್ಞಾಪ್ರವಾಹ ತಂತ್ರದಲ್ಲಿ ನೂರಾ ಅರವತ್ತು ಪುಟಗಳಲ್ಲಿ ಹಿಡಿದಿಟ್ಟಿದ್ದಾರೆ. ಅತಿ ಆಧುನಿಕ ಮನೋ ವಿಜ್ಞಾನ ವಿಚಾರಗಳ ಜೊತೆಜೊತೆಗೆ ಡೈಲೆಕ್ಟಿಕ್ ಮೆಟೀರಿಯಲಿಸಂ, ಎಕ್ಸಿಸ್ಟೆನ್ ಷಿಯಲಿಸಂ, ಜಿಡ್ಡು ಕೃಷ್ಣಮೂರ್ತಿಯವರ ದರ್ಶನ, ಓಷೋ ವಿಚಾರಗಳು, ಇತ್ಯಾದಿಗಳ ಒಂದು ವಿಚಿತ್ರ ಕಲಬೆರಕೆ ನಿಮಗೆ ಅರ್ಥವಾಗದಿದ್ದರೆ, ಈ ಕಾದಂಬರಿಯ ಬಗೆಗೆ ಈಗಾಗಲೇ ಬಂದಿರುವ ಹದಿನಾರು ವಿಮರ್ಶಾ ಲೇಖನಗಳ ಸಹಾಯ ಪಡೆಯಬಹುದು.

'ಒಂದು ಬಳ್ಳಿ-ಎರಡು ಹೂವು' ಲಲನಾಮಣಿಯವರ ಇದೇ ಕ್ಯಾಲೆಂಡರ್ ವರ್ಷದ ಹದಿನೇಳನೆಯ ಪುಷ್ಪ. ಸುರಸ, ಸುರಮ್ಯ, ಸಮನೋಹರ ಕಾದಂಬರಿ. ಸುಲ್ತಾನನ ಮಹಿಳೆಯರು ಮತ್ತು ಅವರ ಹತ್ತಿರವಿದ್ದ ಒಡವೆ, ಸೀರೆಗಳ, ಅವರ ಮಹಲುಗಳ ಭವ್ಯ, ದಿವ್ಯ ನಿರೂಪಣೆ ಇಲ್ಲಿನ ವಿಶೇಷ. ಟಿಪ್ಪೂ ರಣರಂಗದಲ್ಲಿ ಕತ್ತಿ ಬೀರುತ್ತಿದ್ದ. ಆದರೆ ಆತ ಹೆಚ್ಚಿನ ವಿಜಯ ಸಾಧಿಸಿದ್ದು ತನ್ನ ಮುಂಗುಳ್ನಗೆಯಿಂದ ತನ್ನ ಮಡದಿಯರ ಚಿಕ್ಕ ಚಿಕ್ಕ ಆಸೆಗಳನ್ನು ಸಂತೋಷದಿಂದ ಕಾರ್ಯಗತಗೊಳಿಸು ತ್ತಿದುದರಿಂದ ಎಂದು ಲೇಖಕಿ ತೋರಿಸಿದ್ದಾರೆ. ಸುಲ್ತಾನ ತನ್ನ ಬೇಗಂ ಬಯಸಿದ್ದ 'ಒಂದು ಬಳ್ಳಿ ಎರಡು ಹೂವು' ಡಿಸೈನ್ ಇರುವ ಒಂದು ಮೂಗಬೊಟ್ಟಿಗಾಗಿ, ಕೇರಳ ವನ್ನು ಗೆದ್ದು ಅಲ್ಲಿನ ಅಕ್ಕಸಾಲಿಗರನ್ನು ವಶ ಮಾಡಿಕೊಂಡ ಎಂದು ಹೇಳುವ ಲೇಖಕಿ ಇತಿಹಾಸಕ್ಕೆ ಒಂದು ಹೊಸ ಪುಟ ಸೇರಿಸಿದ್ದಾರೆ.



# ಯಾತ್ರಿಕರ ಪತ್ರ

—"ಕೇಷ"

---

ಶಿಂಗಾರಗೇರಿ ಶಿಂಗಾರಮ್ಮನ ಪ್ರಸಂಗ-ನಮ್ಮನ್ನು ತಲಕಾಡಿನತ್ತ ವದ್ದು ಸಾಗ ಹಾಕಿತ್ತು. ಬಹಳ ಸಮಯ ನಮ್ಮ ಬುದ್ಧಿ ಸ್ಥಿಮಿತಕ್ಕೆ ಬರದೆ-ಗೊಂದಲಕ್ಕೊಳಗಾಗಿತ್ತು.

"ರಾಜಾ-ರಾತ್ರಿ ನಾವು ಕಂಡಿದ್ದೆಲ್ಲಾ-ಆ ಮಂಜಣ್ಣ-ಶಿಂಗಾರಮ್ಮನ ಭೂತ ತಿಂದು ಬಿಟ್ಟಿದ್ದ ಖಾಲಿ ತಟ್ಟೆ-ಇವೆಲ್ಲ ನಿಜವಾ ಅಥವಾ ಕನಸೋ!" ಕೇಳಿದೆ.

"ಹಾಗಾದ್ರೆ ಮುಸಾಫಿರ್‌ಖಾನೇನೇ ಕನಸಿರಬೇಕು" ಅಂದ ಚಂದಿ.

''ಮಂಜ-ಶಿಂಗಾರಿ ಖಾನೆಯೊಳಗೊ-ಖಾನೆ ಶಿಂಗಾರಿ ಮಂಜರೊಳಗೋ• ಖಾನೆ ಮಂಜ ಶಿಂಗಾರಿಗಳೆರಡು ಭಟ್ಟನ ಗುಪ್ತರೊಳಗೊ-ಯಾರು ಬಲ್ಲರು?" ಅಂತ ರಾಜ ದಾಸ ಸಾಹಿತ್ಯವನ್ನೇ ನುಡಿದ.

ಸುಮಾರು ಮೂರು ಕಿಲೋಮೀಟರ್ ದೂರ ನಾವು ತುಳಿದಿರಬಹುದು ಲ್ರೋ ನೋಡ್ರೋ ಅಲ್ಲಿ, ನಮ್ಮ ಮುಸಾಫಿರ್‌ಖಾನೆ ಭೂತಗಳು!-ಅಂತ ಚಂದಿ ದಿಢೀರಂತ ಸೈಕಲಿಂದಿಳಿದ.

ರಾಜಾ-ನಾನೂ ಇಳಿದೆವು. ಹೌದು ಕೇವಲ ಒಂದು ಕ್ರಿಕೆಟ್ ಪಿಚ್ಚಿನಷ್ಟು ದೂರದಲ್ಲಿ ನಮ್ಮ ಮುಂದೆ ಒಬ್ಬ ಹುಡುಗ ಒಬ್ಬ ಹೆಂಗಸು ನಡೆದು ನಡೆದು ಹೋಗುತ್ತಿದ್ದರು. ಹಿಂಬದಿಯಿಂದ ನೋಡಿದರೆ-ಬಿಲ್‌ಖುಲ್ ಮುಸಾಫಿರ್‌ಖಾನೆಯ ಹುಡುಗ-ಮಂಜಣ್ಣನ ಹಾಗೇ ಆಕಾರ-ಮೈಕಟ್ಟು. ನಾವು ಯಾರೂ-ಬೆಳಗಿನ ರಘಾವ ನಾಷ್ಟಾ ಮುಗಿಸಿದ ಹೆಣ್ಣಿನ ಮುಖ ನೋಡಿರಲಿಲ್ಲ. ಆದರೆ-ಈ ಹೆಣ್ಣೇ ಆ ಹುಡುಗ ಹೇಳಿದ ಶಿಂಗಾರಿ ಭೂತದ ಹೆಣ್ಣಿರಬಹುದು ಎಂದೆನ್ನಿಸಿತು.

"ಅವರೇ ಮಂಜ-ಶಿಂಗಾರಮ್ಮ ಅಂತೀಯ?" ಚಂದೀನ ಕೇಳಿದೆ.

"ಅದಕ್ಕೆ ಅನುಮಾನವೇ ಇಲ್ಲ-"ಬಾ ನೇರವಾಗಿ ನೋಡೋಣ-ಅಂತ ಹೇಳಿ-ಚಂದಿ ತನ್ನ ವಾಹನವೇರಿ ಒಲಿಂಪಿಕ್ ವೇಗದಲ್ಲಿ ಚಾಲಿಸಿ ಆ ಪಾದಚಾರಿಗಳಿಗೂ ಮುಂದೆ ತುಸು ದೂರದಲ್ಲಿ ಇಳಿದು ನಿಂತ ನಾನೂ ರಾಜಾ-ಚಂದೀನ ಸೇರಿಕೊಂಡೆವು.

ಆ ಹುಡುಗ-ಹೆಂಗಸು ನಮ್ಮ ಹತ್ತಿರ ಬಂದರು-ಹೌದು-ಬಿಲ್‌ಖುಲ್ ಮಾಣಿ ಕಮ್ ಮೋಟಿ ಮಂಜಣ್ಣಾನೇ! ಹಿಂದಿನ ರಾತ್ರಿ ನಮ್ಮ ಸೇವೆ ಮಾಡಿದ್ದ ಹೈದನೇ!

"ಮಂಜಣ್ಣಾ!" ರಾಜ ಕರೆದ.

ಆ ಹುಡುಗ-ಹೆಂಗಸು ನಮ್ಮನ್ನು ಕಣ್ಣೆತ್ತಿ ಕೂಡ ನೋಡದೆ-ಗಮನಿಸಲೇ ಇಲ್ಲದವರ ಹಾಗೆ ಮುಂದೆ ನಡೆದರು.

"ಮಂಜಣ್ಣಾ-ಶಿಂಗಾರಗೇರಿ ಮಂಜಣ್ಣಾ--"

ಪ್ರಯೋಜನವಾಗಲಿಲ್ಲ.

"ಮಂಜಣ್ಣಾ....ತಾಯೀ....ಸ್ವಲ್ಪ ನಿಲ್ಲಿ" ಅಂತ ಕೂಗಿಕೊಂಡ ಚಂದಿ.

ಇಬ್ಬರೂ ನಿಂತರು.

"ಯಾರನ್ನ ನೀವು ಕರೆದದ್ದು?" ಹೆಂಗಸು ಕೇಳಿತು.

ಈ "ಹುಡುಗ ಮಂಜಣ್ಣನಲ್ವೆ? ಶಿಂಗಾರಗೇರಿ ಮುಸಾಫಿರ್‌ಖಾನೆ ಮೋಟಿ ಹುಡುಗ...."

ಹೆಂಗಸು ಹುಡುಗನ ಕಡೆ ನೋಡಿದಳು.

"ಏನ್ಲಾ ಈ ಜನ ಹೇಳ್ತಿರೋದು?" ಕೇಳಿದಳು.

"ನಂಗೊತ್ತಿಲ್ಲ-ಯಾವ ಶಿಂಗಾರಗೇರಿನಪ್ಪ ನೀವು ಯೇಳ್ತಿರೋದು? ಆ ಎಸ್ರಿನ ಊರೇ ಈ ಸೀಮ್ಯಾಗಿಲ್ಲ" ಅಂದ- ಚಾಲಾಕು ಹುಡುಗ.

"ಹಿಂದಿನ ಊರಪ್ಪಾ-ಅಲ್ಲಿ ಬಸ್‌ಸ್ಟಾಂಡಿದೆ-ಒಂದು ಭಟ್ಟರ ಹೋಟ್ಲಿದೆ-ಪಕ್ಕದಲ್ಲಿ ಮುಸಾಫಿರ್ ಖಾನೆ ಇದೆ-ಅಲ್ಲಿ ಬಿಲ್‌ಖುಲ್ ನಿನ್ನ ಹಾಗೇ ಇರೋ ಹುಡುಗ-ಮಾಣಿ ಕೆಲ್ಸ-ಮೋಟಿ ಕೆಲ್ಸ ಮಾಡ್ತಾನೆ-ನಿನ್ನೆ ರಾತ್ರಿ ನಾವು....

"ಬರ್ಲಾ-ನಮ್ಮ ಬಸ್ ಬಂತು-ಈವಯ್ಯನತ್ರ ನಮಗೇನು ಮಾತು?"-ಅಂತ ಕಿರ್ಚ್ಲತ್ತಾ-ಆ ಮಹತಾಯಿ-ಆ ಕಡೆ ಕೆಮ್ಮಿಕೊಂಡು ಕೆ.ಎಸ್.ಆರ್.ಟಿ.ಸಿ. ಬಸ್ಸನ್ನು ನಿಲ್ಸಿ-ಆ ಹುಡುಗನ್ನ ಎಳ್ಕೊಂಡು ಬಸ್ ಹತ್ತಿಬಿಟ್ಟಳು.

ಬಸ್ ಹೊರಟಾಗ- ಆ ಇಬ್ಬರೂ ನಮ್ಮ ಕಡೆ ನೋಡುತ್ತಾ ತುಂಟುನಗೆ ಬೀರಿದ ಹಾಗೆ ಕಂಡಿತು. ಶಿಂಗಾರಗೇರಿ ಸಮಸ್ಯೆ ಹಾಗೇ ಉಳಿಯಿತು. ಮೊದಲೇ ತಲೆ ಕೆಟ್ಟಿದ್ದ ನಮಗೆ ಈಗ ಬುದ್ಧಿಭ್ರಮಣೆಯೂ ಆಯ್ತು.

“ರಾಜಾ-ನಿನ್ನ ದಾಸರ ಪದಕ್ಕೆ ಈಗ ಆ ಭಟ್ಟನ್ನೂ ಊರನ್ನೂ ಸೇರಿಸು-ಮುಂಜು ಶಿಂಗಾರಿ ಖಾನೆ ಭಟ್ಟ ಶಿಂಗಾರಿಗೇರಿ-ಆದ್ರೆ ಸಧ್ಯದಲ್ಲಿ ಬೇಡ” ಅಂದ ಚಂದಿ.

ಮುಂದೆ ಸ್ವಲ್ಪ ದೂರದಲ್ಲಿ ಒಂದು ಮರದ ಕೆಳಗೆ ಒಬ್ಬ ಪರಂಗಿ ಹಣ್ಣುಗಳನ್ನು ಎಳೆನೀರು ಕಾಯಿಗಳನ್ನ ಮಾರುತ್ತ ಕೂತಿದ್ದ. ಒಂದು ಪರಂಗಿಹಣ್ಣನ್ನು ಕೊಯ್ಸಿ ತಿಂದು-ಒಂದೊಂದು ಎಳೆನೀರು ಕುಡಿದೆವು. ನಮ್ಮ ಹೊಟ್ಟೆ ತಣ್ಣಗಾದವು.

‘‘ಯಾವೂರು ನಿಮ್ದು?” ಅಂದ-ಅಂಗಡಿಯುವ-ಹಣ್ಣುಗಳ ಹಣ ತೆಗೆದುಕೊಳ್ತಾ.

“ಬೆಂಗಳೂರು-ನಿಂದು ಯಾವೂರು?” ಚಂದಿ ಕೇಳಿದ.

“ಇಲ್ಲೇ ಶಿಂಗಾರಗೇರಿ-’’

ನನಗೆ ಎಲೆಕ್ಟ್ರಿಕ್ ಷಾಕ್ ತಾಗಿದ ಹಾಗಾಯ್ತು. ರಾಜ ಚಂದಿ ಕೂಡ ಬೆಚ್ಚಿ ಬಿದ್ದಿದ್ದನ್ನು ನೋಡಿದೆ.

“ನಿನ್ನೆ ರಾತ್ರಿ ನಾವು ಅಲ್ಲೇ ಉಳ್ಕೊಂಡಿದ್ವಿ........ಅಲ್ಲಿ....”

‘ರಾಜ ಚಂದಿ ನನ್ನ ಮಾತನ್ನ ಹಠಾತ್ ನಿಲ್ಲಿಸಿದರು.

ರಾಜ ನನ್ನನ್ನು ತಿವಿದ. ಚಂದಿ-ಮಧ್ಯೆ ಬಾಯಿ ಹಾಕಿದ....

“ಏನಪ್ಪ-ನಿನ್ನೂರಿಗೆ ಶಿಂಗಾರಗೇರೀಂತ ಹೆಸರು ಏಕೆ ಬಂತು?’’

“ನಂಗೊತ್ತಿಲ್ರ-ಆದ್ರೆ ನಮ್ಮ ತಾತ ಹೇಳ್ತಿದ್ದ-ನನ್ನ ತಾತನ ದೊಡ್ಡಪ್ಪ-ಆ ಊರಿನ ಪಟೇಲ್ರು ಆಗ ಆ ಊರಿನೆಸ್ರು ಗಿಡ್ಡನ ಕೇರೀಂತ-ನಮ್ಮ ತಾತನ ತಾತನೆಸ್ರು ಗಿಡ್ಡಪ್ಪಾಂತ. ಒಂದು ಬಾರಿ ಸಿರಿಹಟ್ಟೀ ಕಡೆಯಿಂದ ಒಂದು ನಾಟ್ಕದ ಕಂಪ್ನಿ ಬಂತಂತೆ. ಅದರಲ್ಲಿ ಶಿಂಗಾರಿ ಅಂತ ರಾಣಿ ಪಾರ್ಟ್ ಮಾಡೋಳಿದ್ಲು ನನ್ನ ತಾತನ ದೊಡ್ಡಪ್ಪನ ಮಗ ಗುರಪ್ಪ-ಒಂಥರಾ ಕಾಮಣ್ಣ. ನಾಟ್ಕದ ಕಂಪ್ನಿ ಊರು ಬಿಡ್ತು ಶಿಂಗಾರಿ ಇಲ್ಲೇ ಉಳ್ಕೊಂಡ್ಳು. ಗುರಪ್ಪ-ಪಟೇಲ ಆದ. ಶಿಂಗಾರಿ ಒಂದು ಹೆಣ್ಣು ಮಗು ಹೆತ್ತು-ಪ್ರಾಣ ಬಿಟ್ಳಂತೆ. ಅವಳ ಸಮಾಧಿ ನಮ್ಮೂರು ಈಗಿನ ಬಸ್‌ಸ್ಟಾಂಡತ್ರ ಇತ್ತಂತೆ. ಗುರಪ್ಪ ಈ ಊರಿಗೆ ಶಿಂಗಾರಗೇರೀಂತ ಹೆಸರಿಟ್ಟು ಬೋರ್ಡ್ ಬರೆಸ್ದ’’.

ನನ್ನ ಕುತೂಹಲ ಕೆರಳಿತ್ತು.

“ಆ ಹೊಟೆಲು ಭಟ್ಟರು-ನಿದೇ ಊರಿನೋರೋ?”

"ಹೌದ್ರ. ಅವರಜ್ಜ-ಶಾನುಭೋಗರಂತೆ. ಆದ್ರೆ-ಮಗ ಬಸ್ ಸ್ಟಾಂಡ್ ಬರಂತ್ಲೂ ಹೋಟ್ಲಿಟ್ಟ. ಈಗಿರೋ ಭಟ್ರು-ಮೂರನೇ ತಲೆ....

ಹಣ್ಣಿನವ-ಇದ್ದಕ್ಕಿದ್ದ ಹಾಗೆ ತನ್ನ ಧ್ವನಿ ತಗ್ಗಿಸಿದ.

"ಇನ್ನೊಂದಿಸ್ಯ ಗೊತ್ತಾ? ಈಗಿರೋ ಭಟ್ರು ಆ ಶಿಂಗಾರಿ ಮೊಮ್ಮಗಳನ್ನ ಕೂಡ್ಕೆ ಮಾಡ್ಕೊಂಡೌರೆ-ಒಬ್ಬ ಮಗ ಕೂಡ ಇದ್ದಾನೆ....ಅವರಿಗೆ...."

ಮುಂದಿನ ವಿವರ ನಮಗೆ ಕೇಳುವ ಲಭ್ಯವಿರಲಿಲ್ಲ. ಒಂದು ಕೆಎಸ್ಆರ್‌ಟಿಸಿ ಬಸ್ ಬಂದು ಅಲ್ಲೇ ನಿಂತಿತು. ಒಂದು ಕ್ಷಣದಲ್ಲಿ ಬಸ್ಸಿನೊಳಗಿಂದ ಪ್ರಯಾಣಿಕರೆಲ್ಲಾ ಇಳಿದು-ಎಳನೀರು ಹೀರಲು ಧಾವಿಸಿದರು. ನಾವು ನಮ್ಮ ತಲಕಾಡು ದಾರಿ ಹಿಡಿದೆವು.

"ಬೆಳಿಗ್ಯೆ ನಮ್ಮ ನಾಷ್ಟಕ್ಕೆ ಎಷ್ಟಯ್ಯಾ ಬಿಲ್ ಆಯ್ತು?" ಚಂದಿ ಕೇಳಿದ.

"ಭಟ್ಟನ ಕೈಗೆ ಒಂದು ನೋಟು ಕೊಟ್ಟೆ-ಹತ್ತಂತ ಜ್ಞಾಪ್ಕ".

"ಚಿಲ್ರೆ ವಾಪಸ್ ಕೊಟ್ನಾ?"

"ನಾನು ಕೇಳ್ಳೇ ಇಲ್ಲ...."

"ಸರಿ-ಭೂತದ ಭಯಕ್ಕೆ ನಾವು ತೆತ್ತ ಫೈನು" ಅಂದ ಚಂದಿ.


3.30
6.30
9.30
ಮಕ್ಕಳು, ಮುದುಕರಿಗೆಲ್ಲ
ಅತ್ಯುತ್ತಮ ಮನರಂಜನೆ
ಚಂದ್ರ

# ಬೇಜವಾಬ್ದಾರಿ ಕಾಗದಗಳು

— ಅ.ರಾ.ಸೇ.

---

ಅಪರಂಜಿ ಸಂಪಾದಕರ ಸ। ಕ್ಕೆ।

ಮಾನ್ಯರೇ,

ಈಚೆಗೆ ವಿಶ್ವವನ್ನು ಗಡಗಡ ನಡುಗಿಸುವ ಒಂದು ಸಮಾವೇಶ ಬೆಂಗಳೂರಿನಲ್ಲಿ ಆಯಿತಷ್ಟೇ. ಅದರಲ್ಲಿ ಪ್ರೇಕ್ಷಕನಾಗಿದ್ದ ನನ್ನ ಅಳಲನ್ನು ತೋಡಿಕೊಳ್ಳುತ್ತಿದ್ದೇನೆ.

ಈಗ್ಗೆ ಐದಾರು ವರ್ಷಗಳ ಹಿಂದೆಯೇ, ರೂಮ್ ಟೆಂಪರೇಚರಿನಲ್ಲಿ ಎಂದರೆ ಇಪ್ಪತ್ತೈದು—ಮೂವತ್ತು ಡಿಗ್ರಿ ಸೆಲ್ಸಿಯಸ್ ತಾಪಮಾನದಲ್ಲಿ ಕೆಲಸ ಮಾಡುವ ಸೂಪರ್ ಕಂಡಕ್ಟರುಗಳನ್ನು ನಾನು ಕಂಡುಹಿಡಿದು ಪತ್ರಿಕಾ ಹೇಳಿಕೆಗಳನ್ನು ಕೊಟ್ಟೆ. ಅದನ್ನು ಸಹಿಸದ ವಿದೇಶಿ ವಿಜ್ಞಾನಿಗಳು ನನ್ನ ಸಂಶೋಧನೆಯನ್ನು ತುಂಕಡಾ ತುಂಕಡಾ ಮಾಡಿದರು. ಇಲ್ಲವೇ ಕಡೆಗಣಿಸಿದರು.

ಬಡತನದ ರೇಖೆಯಿಂದ ಹಲವರನ್ನು ಮೇಲಕ್ಕೆತ್ತಿದ್ದೇವೆ; ವಿಶ್ವ ಶಾಂತಿಯೇ ನಮ್ಮ ಯುದ್ಧದ ಉದ್ದೇಶ; ಇತ್ಯಾದಿ ಹೇಳಿಕೆಗಳನ್ನು ಆ ವಿಜ್ಞಾನಿಗಳು ವಿರೋಧಿಸುವುದಿಲ್ಲ; ಏಕೆಂದರೆ ಅವರೆಲ್ಲಾ ಲ್ಯಾಬೊರೇಟರಿ ಕ್ರಿಮಿಗಳು; ಅವಕ್ಕೆ ಕಂಪನಿಗಳೋ, ಸರ್ಕಾರಗಳೋ ಹಣ ಒದಗಿಸುತ್ತವೆ.

ಆದರೆ ನಾವು ನೋಡಿ ಕೇವಲ ರೂಂ ಟೆಂಪರೇಚರೊಂದನ್ನೇ ಇಟ್ಟುಕೊಂಡು ಪ್ರಯೋಗ ಮಾಡಬೇಕು.

ಥ್ಯಾಲಿಯಂ, ಯಿಟ್ರಿಯಂ, ಸಂಯುಕ್ತಗಳು ಎಂದರೆ ಶಾಸಕರು, ಅಳರಸರು ತಲೆಕೊಡವುತ್ತಾರೆ. ಗ್ರಾಂಟಿಗಾಗಿ ಧರ್ಮವನ್ನೇ ತೊರೆಯುವ ಮಹಾ ಸಂಸ್ಥೆಗಳಿರುವ ನಮ್ಮ ದೇಶದಲ್ಲಿ, ಬಡಪಾಯಿಗಳಾದ ಹೊಟ್ಟೆಪಾಡಿಗೆ ಹೊಡೆದಾಡುವ ನಮ್ಮ ಗತಿಯೇನು? ರಷ್ಯದ 'SQUID' ಅನ್ನು ಒಪ್ಪಿಕೊಂಡರಲ್ಲಾ ಇವರೇನು ಅದನ್ನು ನೋಡಿದ್ದಾರೆ?

ಅಲ್ಲದೆ ನಾವು ಕಂಡುಹಿಡಿದಿರುವ ಸೂಪರ್ ಕಂಡಕ್ಟರ್ ಪ್ರಯೋಗಕ್ಕೆ ಎಟುಕುವುದಿಲ್ಲ. ಏಕೆಂದರೆ ಇದು ಶೇ. ನೂರು ವಾಹಕ. ಪ್ರಯೋಗ ಸಿದ್ಧವಲ್ಲ, ಏಕೆಂದರೆ ಇದರಲ್ಲಿ ವಿದ್ಯುತ್ ಪ್ರವಾಹವು ವಾಹಕದ ಇನ್ನೊಂದು ತುದಿಯು ಯಾವ

ಬಿಂದುವಿನಲ್ಲೂ ಲಭ್ಯವಾಗುವುದಿಲ್ಲ. ಖಳನಾಯಕನ ಪ್ರೇಮವಿದ್ದ ಹಾಗೆ! ನಾಯಕನಿಗಿಂತ ಹೆಚ್ಚು ತೀವ್ರವಾಗಿ ಪ್ರೀತಿಸುತ್ತಾನೆ. ಆದರೆ ಅದು ನಾಯಕಿಯ ಮನಸ್ಸಿನಲ್ಲಿ ಹೋಗಿ ನಿಲ್ಲದು.

ಸರಕಾರಿ ಹೇಳಿಕೆಗಳ ಹಾಗೆ:

ಕಳೆದ ದಶಕದಲ್ಲಿ ನಮ್ಮ ರಾಜ್ಯವೊಂದರಲ್ಲೇ ಅದೆಷ್ಟು ಪಂಪ್‌ಸೆಟ್ಟುಗಳು ಕೊಳವೆ ಭಾವಿಗಳು ಆಗಿವೆ, ಎಷ್ಟು ದುಡ್ಡು ಖರ್ಚಾಗಿದೆ ಗೊತ್ತೇ? ಪ್ರದೇಶ ಸಮಾಚಾರ ಮತ್ತು ಪತ್ರಿಕೆಗಳಲ್ಲಿ ಈ ಬಾಬ್ತು ಆಯಿತೆಂದು ಘೋಷಿಸಲಾದ ಮೊತ್ತವನ್ನು ನಾನು ಕೂಡಿ ಇಟ್ಟಿದ್ದೇನೆ. ಇದು ಅಮೆರಿಕಾದ ಬಜೆಟ್ಟಿನಲ್ಲಿ ಇರುವ ಮೊತ್ತಕ್ಕಿಂತ ಹೆಚ್ಚು. ನಮ್ಮಲ್ಲಿ ಅಷ್ಟು ಆದಾಯವೇ ಇಲ್ಲ, ಗೊತ್ತೆ? ಸ್ಥಳೀಯ, ರಾಜ್ಯ, ರಾಷ್ಟ್ರ ಚುನಾವಣೆಗಳಲ್ಲೂ ಅಷ್ಟು ಹಣ ಸುಮಾರು ರೌರವ ತಾಪಮಾನದಲ್ಲಿ ನಿರೋಧವಿಲ್ಲದೆ ಹರಿದುಹೋಗಿದೆ. ಅದನ್ನು ಸರಿಯಾಗಿ ಉಪಯೋಗಿಸುವ ಬಿಂದು ಯಾವುದೋ ಗೊತ್ತಿಲ್ಲ. ನಾನೇ ಒಪ್ಪಬೇಕಾದರೆ, ಅವರೆಲ್ಲಾ ನನ್ನನ್ನು ಏಕೆ ಬೈಯಬೇಕು?

ಉತ್ತರಕ್ಕಾಗಿ ಕಾದಿರುವ

ನಿಮ್ಮ

ಬಿರುದೆಂತೆಂಬರ ಗಂಡ

ಮಾನ್ಯ ಸಂಪಾದಕರೇ,

ಕನ್ನಡಮ್ಮನ ಗುಡಿಯಲ್ಲಿ ಒಂದಲ್ಲ ಒಂದು ಕೋಲಾಹಲ ಇದ್ದೇ ಇರುತ್ತದೆ. ಕಳೆದ ದಶಕದಲ್ಲಿ ಪೂಜಾರಿಯ ಹಕ್ಕು ಯಾರದು ಎಂದಿತ್ತು. ಈಗ ಪ್ರತಿ ವರ್ಷದ ಪರಿಷೆಯಲ್ಲಿ ಅಗ್ರಪೂಜೆ ಯಾರಿಗೆ ಅಂತ ಈ ಕೋಲಾಹಲ ಕನ್ನಡಮ್ಮನ ಗುಡಿ ಜೀವಂತವಾಗಿದೆ ಎಂದು ಪ್ರೂವ್ ಮಾಡುತ್ತದೆ. ಇದನ್ನು ಕುರಿತು ತಾವು ಲೇಖನ ಬರೆದಿರಲಿಕ್ಕೇ ಸಾಕು.

ನನ್ನನ್ನು ಯಾರೆಂದರೆ ಅವರು 'ನಿಮ್ಮ ಅಭಿಪ್ರಾಯವೇನು' ಎಂದು ಕೇಳುತ್ತಿದ್ದಾರೆ. ನನಗೆ ದೇವರೇನೋ ವರ ಕೊಟ್ಟಿದ್ದಾನೆ, ಆದರೆ ಪೂಜಾರಿಗಳ ಕಣ್ಣಿನಲ್ಲಿ ನಾನು ಕ್ರಿಮಿ.

ಮಹನೀಯರೇ, ನನ್ನ ಈ ದುಸ್ಥಿತಿಗೆ ತಾವೇ ಕಾರಣರೆಂದು ನಿಮ್ಮತ್ತ ಬೆರಳು ತೋರುವುದು ಬಹಳ ಸಂತೋಷದ ವಿಷಯ

ಸಾಹಿತ್ಯದಲ್ಲಿ ಹಾಸ್ಯಕ್ಕೆ ಬೆಲೆಯಿಲ್ಲ. ಹಾಸ್ಯವೆಂದರೆ ಕದ್ದ ಪೋಲಿ ಜೋಕುಗಳು ಎಂಬಭಿಪ್ರಾಯವೇ ವ್ಯಾಪಕವಾಗಿದೆ. ಇಲ್ಲದಿದ್ದರೆ ಬರಿಯ ಶಬ್ದ ಚಮತ್ಕಾರ, ವಿರೋಧಾಭಾಸ ಎಂಬ ಸಿದ್ಧಾಂತ ನೆಲೆಯೂರಿದೆ. ಬಡ ನೆಂಟರಿಗಿಕ್ಕುವ ಆರಿದ ಕೂಳಿನಂತೆ ಹಾಸ್ಯ ಸಾಹಿತ್ಯಕ್ಕೂ 'ರೆಕಗ್ನಿಷನ್' ದೊರಕಿದೆ.

ನಮ್ಮ ಹಿರಿಯರು ಹೇಳುತ್ತಿದ್ದರು. "ಸತ್ಯವೇ ಶ್ರೇಷ್ಠ ಹಾಸ್ಯ" ಎಂದು. ಸತ್ಯ ಎಲ್ಲ ಕಾಲಕ್ಕೂ ಕಹಿ.

ಕನ್ನಡಮ್ಮನ ಗುಡಿಯಲ್ಲಿ ಉಳಿದೆಲ್ಲ ಕಡೆಗಳಂತೆ ಎರಡು ಪಾರ್ಟಿಗಳು. ಅದರಲ್ಲಿ ಭಿನ್ನಮತೀಯರು' ಪಕ್ಷಾಂತರಿಗಳು, ಕೋಮು, ಅಧಿಕಾರ, ಪ್ರಾದೇಶಿಕತೆ, ಸ್ವಜನ ಪಕ್ಷಪಾತ, ಇಷ್ಟೇ ತಾನೇ?

ಸಾರ್ವಜನಿಕ, ಸಮಕಾಲೀನ ಜೀವನದಲ್ಲಿ ಎಲ್ಲ ಕಡೆಗಿದ್ದುದೇ ಇಲ್ಲೂ ಇದೆ, ತಪ್ಪೇನು? ಈಗ ಹೊಸದೊಂದು ಪಾಯಿಂಟ್ ಎದ್ದಿದೆ. ಸಾಹಿತಿ ಎಂದರೇನು, ಅಸಾಹಿತಿ ಎಂದರೇನು? ಇದು ಬಹುಮತದಿಂದ ನಿರ್ಣಯವಾಗುವುದಾದುದರಿಂದ ರಾಜಕೀಯದಲ್ಲಿದ್ದಂತೆ ಓಟು ಬಂದವನೇ ಸಾಹಿತಿ.

ಇದಕ್ಕೆ ಪ್ರತಿಭಟನೆ, ಅತ್ಯಂತ ಸಮಂಜಸ. ಪ್ರತ್ಯೇಕ ವೋಟ್ ಬ್ಯಾಂಕ್‌ಗಳ ಸ್ಥಾಪನೆ ಇದರ ಗುರಿ ಎಂದೇನೂ ನಾನು ಹೇಳುತ್ತಿಲ್ಲ, ನೆನಪಿಡಿ.

ಇನ್ನೂ ಒಂದು ಮುದ್ದೆ (Point) ಏಳುತ್ತದೆ. ಸಾಹಿತ್ಯದಲ್ಲಿ ಶ್ರೇಷ್ಠತೆಯನ್ನು ಗುರುತಿಸುವುದು ಹೇಗೆ? ಇದನ್ನು ಕಾವ್ಯ ಮೀಮಾಂಸಕರು ವ್ಯರ್ಥವಾಗಿ ಚರ್ಚಿಸುತ್ತಾರೆ.

ಒಂದು ಸಮಿತಿ ನೇಮಿಸುವುದು. (ಅದರಲ್ಲಿರುವುದರಿಂದ ಅವರೂ ಶ್ರೇಷ್ಠ ವಿಮರ್ಶಕರಾಗಿರಲೇಬೇಕು.) ಅಲ್ಲಿ ಬಹುಮತದಿಂದ ಆಯ್ಕೆಯಾದದ್ದೇ ಶ್ರೇಷ್ಠ ಕೃತಿ. ಅದನ್ನು ಪರಸ್ಪರ ಪ್ರಶಂಸೆಯಿಂದಲೇ ಸಮರ್ಥಿಸಬಹುದು.

ಎಷ್ಟೋ ಸಣ್ಣ ಕತೆಗಾರರು ಕವಿಗಳಾದರು? ಎಷ್ಟೋ ಕವಿಗಳು ಏನೇನೋ ಮಾಡಿದರು? ಯಾರ್‍ಯಾರು ಏನೇನನ್ನೋ ಎಷ್ಟೆಷ್ಟನ್ನೋ ಕಮಾಯಿಸಿದರು? ಇಲ್ಲಿ ಸಂದುದೇ; ಅಲ್ಲಿಯೂ ಸಲ್ಲುತ್ತದೆ ತಾನೆ?

ಆದುದರಿಂದ ಅಭ್ಯುದಯ ಕಾಮನಾದವನು ಕಾಕಾಪುತಿ. ಬೆಣ್ಣೆ ಮಾಲೀಷ್ ಗಳನ್ನು ಕೊಂಡು ಗುಂಪು ಕಟ್ಟಬೇಕು. ಇಲ್ಲವೇ ಕಟ್ಟಿದ ಗುಂಪಿಗೆ ಸೇರಬೇಕು. ಆಯ್ಕೆದಾರರಲ್ಲಿ ತೀವ್ರ ಪ್ರಚೋದನೆಯುಂಟುಮಾಡಬೇಕು. ಆಯ್ಕೆಯಾಗುವುದು ಮುಖ್ಯ.

ಹಾಗೇ ನೋಡಿ, ಇಂಡಿಯನ್ ಕ್ರಿಕೆಟ್ಟನ್ನು. ಸೋಲೇನು ಗೆಲುವೇನು: ಒಳ್ಳೆ ಆಟವೇನು ಕಳಪೆ ಆಟವೇನು? ದೇಶವನ್ನು ಪ್ರತಿನಿಧಿಸುವ ಪುಣ್ಯ: ಅದರಿಂದ ಕೀರ್ತಿ; ಅದರಿಂದ ಹಣ, ಹಣದಿಂದ ವ್ಯವಹಾರ.

ಇನ್ನು ಉಳಿದದ್ದು 'ಶಿವೇಶರ ಕ್ಷತಿ' ಅಶುಭದ ನಿವಾರಣೆ. ಇದು ಅವೈಜ್ಞಾನಿಕ ಕಲ್ಪನೆ. ಯಶಸ್ಸು, ಹಣ, ವ್ಯವಹಾರ ನೈಪುಣ್ಯವಿದ್ದರೆ ಕ್ರಿಕೆಟ್ಟೇನು, ಕಾವ್ಯವೇನು! ಕಕವನಾದರೇನು ಕೃತಾರ್ಥನಾದರೆ ಸಾಕು.

ಮಾನ್ಯರೇ, ಮಥಿತ ಯಶೋಧನರೇ, ತಾವೊಂದು ಗುಂಪು ಕಟ್ಟಿದರೆ, ಈ ಭವದೀಯನನ್ನು ಮರೆಯಬೇಡಿ.

ವಂದು ಬೇಡುವ
ಗಂಡು ಶಾರದೆ

೩

ಮಹಾಶಯರೇ,

ಹೊಸ ವರ್ಷ ಬರುತ್ತದೆಯಲ್ಲಾ! ಕವಿ ಪುಂಗವರು ಹಲುಬಿದರು : ಎಲೆ ಸನತ್ಕುಮಾರ, ಗಿಡಮರಗಳು ಚಿಗಿತಂತೆ, ಮನುಷ್ಯನು ಏಕೆ ಚಿಗುರಬಾರದು!

ಭಗವಂತ ಬಹುಶಃ ಹೀಗೆಂದಿದ್ದಾನು: ಕತ್ತರಿಸಿದರೆ ಹೋಗುವ ಅಂಗಾಂಗ ಗಳು, ಫೇಲಾದರೆ ಜೀವವನ್ನೇ ಲಾಸ್ ಮಾಡುವ ಹೃದಯವಿದ್ದರೂ, ಮನುಷ್ಯ, ಹೊಟ್ಟೆಯುರಿಯಿಂದ ವರ್ಷಕ್ಕೊಮ್ಮೆ ಚಿಗುರುವ ಮರ-ಗಿಡಗಳನ್ನೆಲ್ಲಾ ನಾಶ ಪಡಿಸುತ್ತಿದ್ದಾನೆ. ಈ ವೃಕ್ಷ ನಾಶಕ್ಕೆ ಲೈಸೆನ್ಸ್ ಕೊಡುವವರೇ, ಪರಿಸರ ನಾಶಕ್ಕಾಗಿ ವಿಭಾಗಗಳನ್ನು ತೆರೆದು, ಪ್ರಸಾರ ಮಾಧ್ಯಮಗಳಲ್ಲಿ ಅಮೂಲ್ಯ ಕಾಲವನ್ನು ನಾಶ ಪಡಿಸುತ್ತಿದ್ದಾರೆ.

ಹೀಗೆ ಪರಿಷತ್ಕ್ಕೇ ನಾಶ ಕಟ್ಟಿಟ್ಟಿರುವಾಗ ಕನ್ನಡಕ್ಕೆ ಬಂದಿರುವ ಅಧೋಗತಿ ಏನೇನೆಂದು ವರ್ಣಿಸಲಿ. ಅದಕ್ಕಾಗಿ ಇಲಾಖೆಗಳು, ಅಕಾಡೆಮಿಗಳು, ಪರಿಷತ್ತುಗಳು, ಸಂಘಗಳು ಇವೆ.

ಬ್ಯಾಂಕಿಗೆ ಹೋದರೆ, ಹೊರಗೇನೋ ದೊಡ್ಡ ಕನ್ನಡ ಬೋರ್ಡು ಇದೆ. ಒಳಗೆ ಇರುವ ನಮೂನೆಗಳಲ್ಲಿ ಕನ್ನಡದಿಂದ ಹುಟ್ಟಿದ ಇಂಗ್ಲಿಷಿನ ಜೊತೆಗೆ ದೇವನಾಗರಲಿಪಿಯಲ್ಲಿ ಯಾವುದೋ ವಿಲಾಯ್ತಿ ಭಾಷೆ ಇದೆ. ಅದರಲ್ಲಿ ಬ್ಯಾಂಕ್ ಅಂತಲೂ ಬರೆಯಲು ಬರುವುದಿಲ್ಲ ಬೇಂಕ್ ಎಂದೇ ಇದೆಯಂತೆ. ಅದೇನೋ RBI ರೆಗ್ಯುಲೇಷನ್ ಅಂತೆ. RBI ಕನ್ನಡದಲ್ಲಿ ಬರೆಯಲು ಆರ್ಡರ್ ಮಾಡುವಂತೆ ಯಾರೂ ಹೇಳುವವರಿಲ್ಲವೇ?

ಕರ್ನಾಟಕದಲ್ಲಿ ಮಾರಾಟವಾಗುವ ಎಲ್ಲ ವಸ್ತುಗಳ ಮೇಲೂ ಕನ್ನಡ ಬರಹ ಇರಲೇಬೇಕು ಎಂದು ಚಳುವಳಿ ಮಾಡುವವರಿಲ್ಲವೇ?

ಕನ್ನಡದಲ್ಲೇ ಮಾತಾಡುವ ಜನ ವ್ಯಾಪಾರ ವ್ಯವಹಾರವನ್ನು ಕನ್ನಡದಲ್ಲೇ ಮಾಡುವೆವೆಂದು ಪಣ ತೊಟ್ಟರೆ, ನಮಗೆ ಕಚಡಾ ಮಾರುವವರು ಕನ್ನಡದಲ್ಲೇ ಬರೆಯಬೇಕಾಗುತ್ತದೆ.

ಈ ಪಣ ತೊಡಲು ಕನ್ನಡಿಗರು ಹೆಚ್ಚು ಹೆಚ್ಚು ಸಾಹಸಿಗಳಾಗಬೇಕು. ನಮ್ಮವರು ಘಟ ಇದ್ದರೆ ಮಠ ಕಟ್ಟಬಹುದು ಎಂದು ನಂಬಿದವರು. ಮೊನ್ನೆ ಏರ್‌ಬಸ್ ಅಪಘಾತಕ್ಕೀಡಾದವರಲ್ಲಿ ಕನ್ನಡಿಗರು ಎಷ್ಟು ಜನರಿದ್ದಾರೆ?

ಸಾಲದ್ದು ಕಮ್ಮಿಗೆ ನೀಲದ ಬಾವಲಿ, ಈಗ ಕನ್ನಡದ ಸೌಂದರ್ಯ ಉಳಿದಿರುವುದು ಲಿಪಿಯಲ್ಲಿ ಮಾತ್ರ. ಅದರ ಕತ್ತು ಹಿಡಿದು ತಿರುಚಿದರೆ ತೆಲುಗು ಲಿಪಿಯಾಗುತ್ತದೆ ಎಂದು ನಮ್ಮ ಭಾವನೆ. ಯಾವ ಸ್ಥಿರ ಲಗ್ನದಲ್ಲಿ ಕನ್ನಡ ತೆಲುಗು ಏಕ ಲಿಪಿಯಾಗಬೇಕೆಂಬ ಸೂಚನೆ ಬಂದಿತೋ? ಅದನ್ನು ತೆಲುಗು ನಾಡಿನ ಯಾರಾದರೂ, ಯಾವ ವಿಶ್ವವಿದ್ಯಾಲಯದಲ್ಲಿಯಾದರೂ ಚರ್ಚಿಸಿದ್ದಾರೆಯೇ? ಏಕತೆಯ ಭ್ರಮೆ ಗುಂಗು ಬಡಿದ ನಮ್ಮ ವಿಶ್ವವಿದ್ಯಾಲಯ ಅದಕ್ಕೊಂದು ಸಮಿತಿ ಏರ್ಪಡಿಸಿತಂತೆ ! ಅದರಿಂದ ಯಾರಿಗೆ ಲಾಭ? ತೆಲುಗರು ಎಂದಾದರೂ ಅದಕ್ಕೆ ಒಪ್ಪಿಯಾರೇ? ಕೇಳಿದ್ದಾರೆಯೇ, ವಿಚಾರಿಸಿದ್ದಾರೆಯೇ?

ಕನ್ನಡಿಗರು ಇನ್ನಾದರೂ ಎಚ್ಚರಗೊಳ್ಳುವರೇ? ಬಾಳಿರಲಿ, ರಾಜಕೀಯವಿರಲಿ, ಕಲೆ ಸಾಹಿತ್ಯಗಳಿರಲಿ, ಕೊನೆಯ ಪಕ್ಷ ನಮ್ಮ ಲಿಪಿಯ ತಂಟೆಗೆ ಯಾರೂ ಬಾರದಿರಲಿ ಎಂದು ಘೋಷಿಸುವರೇ? ಕನ್ನಡ ಲಿಪಿ ಗಲ್ಲೇರದಿರಲಿ, ಜೈ ಜಗತ್ ! ಎನ್ನುವ.

ತಮ್ಮ ವಿಶ್ವಾಸಿ,
ಹರಿ ಮೀಸೆ ಗಿರಿ ತಿಮ್ಮ

# ಮೂಗಿನ ಕತೆ

—ಶಾಂತಾ ರಘು

---

ನೆಂಟರ ಮನೆಯಲ್ಲಿ ಮದುವೆ ಮುಗಿಸಿಕೊಂಡು ಬಂದು ನಮ್ಮ ಮನೆಯಲ್ಲೇ ಒಂದಷ್ಟು ಜನ ಠೇರಾಯಿಸಿದ್ದರು.

''ಲಲಿತಾ, ನೆನ್ನೇನೇ ಹೇಳಿದ್ದೆನಲ್ಲ. ಇವತ್ತು ಮದುವೆ ಮನೆಯಲ್ಲಿ ಸರಿಯಾಗಿ ನೋಡಿದ್ಯಾ ರಾಮುರಾಯರ ಮಗ ಮೂರ್ತೀನ? ನಿನ್ನ ಮಾಡಿಕೊಳ್ಳೋಕೆ ಅವರಿಗೇನೋ ಇಷ್ಟ. ಕೇಳೋಣವೇನೆ?'' ಅಂತ ನಮ್ಮ ಸೋದರತ್ತೆ ತಮ್ಮ ಮಗಳನ್ನು ಕೇಳಿದರು.

ಕನ್ನಡಿ ಮುಂದೆ ನಿಂತಿದ್ದ ಲಲಿತಾ ''ನೋಡಿದೇಮ್ಮಾ. ನಂಗಿಷ್ಟ ಆಗ್ಲಿಲ್ಲಾ'' ಅಂದಳು ಆರಾಮಾಗಿ.

''ಲೇ ಲಲ್ಲೀ ! ಸಿಲ್ಲೀ ! ಅವಂಗೇನೇ ಕಮ್ಮಿ? ಓದಿದಾನೆ, ಒಳ್ಳೆ ಕೆಲಸದಲ್ಲಿ ಇದಾನೆ. ಮಹಾ ರಂಭೆ ಇವಳು!'' ಅಂತ ತಮ್ಮ ರೇಗಿಸಿದ.

''ಪ್ಲೀಸ್ ಸುಮ್ನಿರೋ ರವಿ. ಹೆಸರೇನೋ ಚೆನ್ನಾಗಿದೆ ಮೂರ್ತಿ....ಆದ್ರೆ ಅವನ ಮೂಗೇ ಚೆನ್ನಾಗಿಲ್ಲ'' ಅಂದ್ಲು. ಎಲ್ಲರೂ ಕಣ್ಣು ಕಣ್ಣು ಬಿಟ್ವಿ.

''ನೋಡಮ್ಮ, ನಾನೇನೂ ನನ್ಗಂಡ ಮನ್ಮಥನ ತರಹ ಇರ್ಬೇಕೂ ಅನ್ಲಿಲ್ಲ. ಸುಮಾರಾದ ಕೆಲಸದಲ್ಲಿದ್ದು ನೋಡೋಕೆ ಸುಮಾರಾಗಿದ್ರೂ ಪರವಾಗಿಲ್ಲ. ಆದರೆ ......ಮೂಗು ಮಾತ್ರ....ದೊಣ್ಣೆ ಮೆಣಸಿನ ಕಾಯಿ ತರಹ ಇರಬಾರದು. ನೀಟಾಗಿ, ನೇರವಾಗಿ ಇರ್ಬೇಕು. A Roman nose ! ಅಮ್ಜಾದ್ ಅಲಿ ಖಾನ್ ತರಹ........'' ಅಂತ ಕನಸು ಕಾಣುತ್ತಾ, ಕಣ್ಣು ತೇಲಿಸುತ್ತಾ ಒಳ ಹೋದಳು.

ಅಬ್ಬಾ ! ಮೂಗಿನ ಮಹತ್ವವೆ? ಆದಿಯಿಂದಲೇ ಮೂಗಿನ ಮಹಾತ್ಮೆ ಶುರುವಾಗುತ್ತೆ....ಅಲ್ವೆ?ಸರ್ವ ವಿಘ್ನ ನಿವಾರಕನಾದ ಗಣಪತಿಯೂ ಸ್ಪೆಷಲ್extra ಉದ್ದ ಮೂಗಿನವನಲ್ವೆ? ಚೂಪು ಮೂಗಿನ ಸುಂಡಿಲಿಯ ಸವಾರಿ ಮಾಡುವ ಆ ಉದ್ದಾನೆ ಮೂಗಿನವನನ್ನು ನಾವು ಎಲ್ಲದಕ್ಕೂ ಮುಂಚೆ ವಂದಿಸುತ್ತೇವೆ.

ಕೃತ ಯುಗದಲ್ಲಿ ರಾಮ ರಾವಣರ ಯುದ್ಧವಾದದ್ದೇ ಮೂಗಿನಿಂದ ಅಲ್ವೆ? ಅಣ್ಣನ ಆಜ್ಞೆಯನ್ನು ಶಿರಸಾವಹಿಸಿ ಲಕ್ಷ್ಮಣ ಶೂರ್ಪನಖಿಯ ಮೂಗನ್ನು anaesthesia ಇಲ್ಲದೆಯೇ ಸರ್ಜರಿ ಮಾಡಿದ್ದರಿಂದಲೇ ಎಲ್ಲ ರಾದ್ಧಾಂತ ಪ್ರಾರಂಭವಾದದ್ದು.

ಕ್ಲಿಯೋಪಾತ್ರಳ ಮೂಗಿನ ಆಕಾರ ಸ್ವಲ್ಪ ಬೇರೆಯಾಗಿದ್ದರೆ ಚರಿತ್ರೆಯೇ ಬೇರೆಯಾಗ್ತಾ ಇತ್ತಂತೆ. ಹೇಳ್ತಾರೆ.

ಕಾಲೇಜಿನಲ್ಲಿ ನಮ್ಮ ಸಹಪಾಠಿಯಾಗಿದ್ದ ಅನಂತಾಚಾರಿಯ ಮೂಗು ಎಲ್ಲ ದಾಖಲೆಗಳನ್ನೂ ಮುರಿದಿತ್ತು. ಬ್ರಹ್ಮದೇವ ಅವನ ಮೂಗನ್ನು ರೂಪಿಸುವಾಗ ಸಾಕ್ಷಾತ್ ಗರುಡನ ಮೂಗನ್ನು model ಆಗಿ ಇಟ್ಟುಕೊಂಡಿದ್ದಿರಬೇಕು. ಸುಮಾರು ಉದ್ದ ಬೆಳೆದ ಮೇಲೆ ತುದಿಯಲ್ಲಿ ಕೊಂಡಿಯ ತರಹ bend ಆಗಿತ್ತು. ಅನಂತಾಚಾರಿ ಸುಲಭವಾಗಿ ನಾಲಗೆಯಿಂದ ಮೂಗನ್ನು ಮುಟ್ಟಿಕೊಳ್ಳುತ್ತಿದ್ದ. ಅವನಿಗೆ ನಾವೆಲ್ಲರೂ ''ನಾಸಿಕಾಗ್ರೇಸರ ಗರುಡಾಚಾರಿ'' ಅಂತ ಪ್ರೀತಿಯಿಂದ ನಾಮಕರಣ ಮಾಡಿದ್ದೆವು.

ಗರುಡಾಚಾರಿಯ ಮೂಗಿನ ತದ್ವಿರುದ್ಧ ನನ್ನ ಗೆಳತಿ ಪಾರ್ವತಿಯ ಮೂಗು, ತುದಿ ತಲೆಯೆತ್ತಿ ಆಕಾಶ ನೋಡ್ತಾ ಇರತ್ತೆ. ''ಪಾರೀ, ನಿನ್ನ ಮೂಗಿನ ಮೇಲೆ ಸುಲಭವಾಗಿ ಒಂದು ನಿಂಬೆ ಹಣ್ಣು ಕೂರಿಸಬಹುದು ಕಣೆ" ಅಂತ ನಾವು ಇವತ್ತಿಗೂ ಲೇವಡಿ ಮಾಡ್ತೀವಿ.

ಫ್ರಾನ್ಸ್ ದೇಶದ ಅಧ್ಯಕ್ಷರಾಗಿದ್ದ ಡಿಗಾಲ್‌ರವರ ಮೂಗು ಅದರ ಅಸಾಮಾನ್ಯ ಅಳತೆಗೆ ಹೆಸರುವಾಸಿಯಾಗಿತ್ತು. ಈಗೇನು, ಗಿಣಿ ಮೂಗಿರಲಿ, ಬಟನ್ ಮೂಗಿರಲಿ, ಯೋಚನೆ ಮಾಡಬೇಕಾಗಿಲ್ಲ. ಪ್ಲಾಸ್ಟಿಕ್ ಸರ್ಜರಿಯಿಂದ ಬೇಕಾದ ಆಕಾರದ ಮೂಗನ್ನು ಪಡೆಯಬಹುದು. ಸಿನಿಮಾ ತಾರೆ ಶ್ರೀದೇವಿ ತನ್ನ ಮೂಗನ್ನು ರಿಪೇರಿ ಮಾಡಿಕೊಂಡ ಮೇಲೆಯೇ ಸೂಪರ್ ಸ್ಟಾರಿಣಿ ಆಗಿದ್ದಂತೆ. ಬಾಕ್ಸರ್‌ಗಳಿಗಂತೂ ತಮ್ಮ ಮೂಗು ಒಡೆದು shapeless ಆಗಿದ್ದರೇ ಹೆಮ್ಮೆ, ಗೌರವ.

ಈಗ 30, 40 ವರ್ಷಗಳ ಹಿಂದಿದ್ದ ಹಾಗೆ ಈಗ ಮೂಗಿನ ಮೇಲೆ ಒಡವೆಗಳ ಭಾರ ಹೇರುವುದಿಲ್ಲ. 91 ವರ್ಷ ಬದುಕಿದ್ದ ನಮ್ಮ ಅಜ್ಜಿಯ ತಾಯಿ ಎರಡು ಮೂಗೂ ಚುಚ್ಚಿ ದೊಡ್ಡ ದೊಡ್ಡ ಬೇಸರಿ ಹಾಕಿಕೊಂಡಿದ್ದಲ್ಲದೆ, ಮಧ್ಯೆ ಬುಲಾಕು ಎಂಬ ಮೂಗಾಭರಣವನ್ನು ಬೇರೆ ಧರಿಸುತ್ತಿದ್ದರು. ನಮಗೆಲ್ಲಾ ಮೋಜು ಇಷ್ಟೆಲ್ಲಾ ಹಾಕಿಕೊಂಡು ಅಜ್ಜಿ ಹೇಗಾದರೂ ಉಸಿರಾಡುತ್ತಾರೋ ಏನೋ ?

ಅಜ್ಜೀ, ಅಜ್ಜೀ ! ಕಣ್ಣು ರೆಪ್ಪೇಗೂ ಯಾಕೆ ಚುಚ್ಕೊಳ್ಳಲಿಲ್ಲಾ ಅಜ್ಜೀ ? ಕಣ್ಣು ಮಿಟುಕಿಸಿದಾಗಲೆಲ್ಲಾ ವಜ್ರ ಫಳಫಳಾಂತ ಹೊಳೀತಾ ಇರತ್ತಲ್ಲ?'' ಅಂತ ಸೀರಿಯಸ್ಸಾಗಿ ಕೇಳುತ್ತಾ ಇದ್ವಿ.

ನಶ್ಯ ಪ್ರಿಯರಿಗೆ ಮೂಗಿಗಿಂತಾ ಗೆಳೆಯ ಬೇರೆ ಉಂಟೆ ? 19ನೇ ಶತಮಾನದ ಆಂಗ್ಲ ಪ್ರಭುಗಳ, ದೊರೆಗಳ ಹತ್ತಿರ ನೂರಾರು ಚಿತ್ರ ವಿಚಿತ್ರಾಕಾರದ, ವಜ್ರ ಖಚಿತವಾದ, ಚಿನ್ನದ, ಬೆಳ್ಳಿಯ ನಶ್ಯದ ಡಬ್ಬಿಗಳ ದೊಡ್ಡ ಸಂಗ್ರಹವೇ ಇತ್ತಂತೆ. ಈ ತರಹ ಅತ್ಯಮೂಲ್ಯವಾದ ನಶ್ಯದ ಡಬ್ಬಿಗಳನ್ನು ಶೇಖರಿಸುವುದರಲ್ಲಿ ಅವರಲ್ಲಿ ಒಬ್ಬರಿಗೊಬ್ಬರು ಭಯಂಕರ ಪೈಪೋಟಿಯಿತ್ತಂತೆ.

ಎಂಟು ವರ್ಷದಲ್ಲಿ ನನಗೆ ಸಂಗೀತ ಹೇಳಿಕೊಡುತ್ತಿದ್ದ ಮೇಷ್ಟ್ರು ಬಲು ಮುದ್ದಾದ ಬೆಳ್ಳಿಯ ನಶ್ಯದ ಡಬ್ಬಿಯಿಟ್ಟಿದ್ದರು. ಸುಮಾರು ವರ್ಷ ಅವರ ಹತ್ತಿರ ಪಾಠ ಹೇಳಿಸಿಕೊಂಡಿದ್ದರೂ, ಅವರ ನಶ್ಯದ ಅಭ್ಯಾಸವೂ, ಭಯಂಕರವಾದ ಸೀನುಗಳೂ ನನಗೆ ಅಭ್ಯಾಸವಾಗಲೇ ಇಲ್ಲ. ಆರು ಶೃತಿಯಲ್ಲಿ ಆರಾಮವಾಗಿ ಆರಭಿ ರಾಗ ವರ್ಣ ಹಾಡ್ತಾ ಇದ್ದಾಗ, ಮೇಷ್ಟ್ರು ಮೂಗಿನ ತುಂಬ ನಶ್ಯ ಏರಿಸಿ, ಹತ್ತಾರು ಮನೆಯವರು ಹಾರಿ ಬೀಳುವ ಹಾಗೆ "ಹಾ ......ಕ್ಷೀ" ಅಂತ ಸೀನಿ ಬಿಡುತ್ತಿದ್ದರು. ಬೆಚ್ಚಿದ ನನ್ನ ಧ್ವನಿ ತಕ್ಷಣ ಹಳಿ ತಪ್ಪಿ—ಬಾಗಿಲ ಸಂದಿಯಲ್ಲಿ ಸಿಕ್ಕಿದ ಸುಂಡಿಲಿಯ ತರಹ ಕೀಚು ದನಿ ಬಂದು ಬಿಡ್ತಾ ಇತ್ತು. ಸಂಭ್ರಮದಿಂದ ಮೂಗು ಒರಸಿ ಕೊಳ್ಳುತ್ತಾ—ಮೇಷ್ಟ್ರು ಆ ಸಂಗತಿಯನ್ನು ಮತ್ತೆ ಮೂರು ಸಲ ಹಾಡಿಸುತ್ತಿದ್ದರು.

"ಸ್ವಲ್ಪ ಧೆಗಡಿ ಆಗಿದೆ ಧಶ್ಯ ಕೊಡೋ" ಅಂದ ಅವ. "ಲಲಗೇ ಇಲ್ಲ. ಲಿಲಗೆಲ್ಲೋ" ಅಂದ ಇವ.

ಅಯ್ಯೋ ! ನೆಗಡಿಯಾಗಿ ಮೂಗು ಕಟ್ಟಿಕೊಂಡು ಪಡುವ ಸಂಕಟವನ್ನು ಇದಕ್ಕಿಂತ ಚೆನ್ನಾಗಿ ವಿವರಿಸಲು ಟಿ. ಪಿ. ಕೈಲಾಸಂ ಬಿಟ್ಟರೆ ಬೇರೆ ಯಾರಿಗೆ ಸಾಧ್ಯ?!

ನೆಗಡಿ ! ಮೂಗಿಗೂ. ನೆಗಡಿಗೂ ಜನ್ಮ ಜನ್ಮಾಂತರದ ಬಿಡಿಸಲಾಗದ ನಂಟು. ನರನ ನಾಸಿಕವನ್ನು ಎಡೆಬಿಡದೆ ಪೀಡಿಸುವ ನಕ್ಷತ್ರಿಕ ನೆಗಡಿ. ಹೇಳದೆ ಕೇಳದೆ ಬಂದಿಳಿಯುವ ನೆಂಟನ ತರಹ ಅಂತಲೂ ಇಟ್ಟುಕೊಳ್ಳಿ. ನೆಗಡಿಗೀಡಾದವನ ದುರವಸ್ಥೆ ನೋಡಿಲ್ವೆ Coldarin ಜಾಹೀರಾತಿನಲ್ಲಿ? ನಾ. ಕಸ್ತೂರಿಯವರು ಹೇಳಿದ ಹಾಗೆ—ಮನುಷ್ಯನ ಮೂಗನ್ನು ಹಿಂಡುವ. ಅವಕಾಶ ಸಿಕ್ಕಿರುವುದು ನೆಗಡಿಗೆ ಮಾತ್ರ. ಮನುಷ್ಯನ ತಲೆಯಲ್ಲಿ ನಾಲ್ಕು ದಿನ ನಿಲ್ಲುವುದೂ ನೆಗಡಿಯೊಂದೇ.

ನೆರೆಮನೆ ರಾಜಿಯ ಮಗ ರವಿಗೆ ವರ್ಷದಲ್ಲಿ 365 ದಿನಗಳೂ ಮೂಗಿನಲ್ಲಿ ಜೋಗದ ಜಲಪಾತ. ಬೇಸತ್ತ ರಾಜಿ "ಅಯ್ಯೋ ! ನಿನ್ನ ಮೂಗನ್ನು ತೊಗೊಂಡು ಹೋಗಿ ಧೋಭಿಗೆ ಹಾಕಬೇಕು, ಅಷ್ಟೆ" ಅಂತ ಗೊಣಗುತ್ತಾಳೆ. "ಮೂಗಿರೋ ತನಕ ನೆಗಡಿ ತಪ್ಪಿದ್ದಲ್ಲ" ಅಂದ್ರೆ ಪಾಪದ ಮೂಗು ಅಪರಾಧಿಯೆ? ಹಾಗಂತ ನೆಗಡಿ ಮೇಲಿನ ಕೋಪಕ್ಕೆ ಮೂಗು ಕುಯ್ದುಕೊಂಡರೆ ನೆಗಡಿ ತಪ್ಪುತ್ತೆ?

ನಮ್ಮಜ್ಜಿಯಂತಹವರ ಮೂಗಾಭರಣಗಳನ್ನು ನೋಡೇ ''ಮೂಗಿಗಿಂತ ಮೂಗುತಿ ಭಾರ (ಆಗ ಬಾರದು)'' ಅನ್ನುವ ಗಾದೆ ಮಾಡಿದರೇನೊ? ಸಮಾಜದ ಸದಸ್ಯೆ ವಿಶಾಲಮ್ಮ ಮಾತು ಮಾತಿಗೂ ತಮ್ಮ 8 ಕಲ್ಲಿನ ವಜ್ರದ ಮೂಗುತಿಯ ಮೇಲೇ bet ಕಟ್ಟುತ್ತಿದ್ದರು. ''ಈ ಸಲ ಕಮಲೀಗೆ ಗಂಡು ಮಗೂನೇ. Bet ಕಟ್ತೀನಿ ಸೋತರೆ ಮೂಗುತಿ ಸಮೇತ ಮೂಗೂ ಕುಯ್ದು ಕೊಡ್ತೀನಿ'' ಅನ್ನೋ ತರಹ ನೂರಾರು ಸಲ bet ಕಟ್ಟಿದ್ದಾರೆ.

''ಅಹಾ ಅಹಾ ! ಇವರ ವಜ್ರದ ಮೂಗುತಿ ಮಿಂಚೋದು ನೋಡಿ'' ಅಂತ 'ಸ್ನೇಹಿತೆಯರು' ಮೂಗು ಮುರಿದರೆ ಅವರೇನು care ಮಾಡುತ್ತಲೇ ಇರಲಿಲ್ಲ. ಜಂಬದಿಂದ ಮೂಗೇರಿಸಿಕೊಂಡು ಓಡಾಡ್ತಾ ಇದ್ರು ಅನ್ನಿ.

ಕನ್ಯಾಕುಮಾರಿಯ ಮೂಗುತಿ ಜಗತ್ಪ್ರಸಿದ್ಧವಾದುದು. ದೋಣಿ, ಹಡಗುಗಳಿಗೆ Light house ಆಗಿದೆ. ಸುಮಾರು 200 ವರ್ಷಗಳ ಹಿಂದೆ ತುಫಾನಿಗೆ ಸಿಕ್ಕಿ ದಿಕ್ಕುಗಾಣದೆ ತೊಳಲುತ್ತಿದ್ದ ಡಚ್ ಹಡಗಿಗೆ, ಸೂರ್ಯನಂತೆ ಹೊಳೆಯುತ್ತಿದ್ದ ಕನ್ಯಾಕುಮಾರಿಯಮ್ಮನ ಮೂಗುತಿ ದಿಕ್ಸೂಚಿಯಾಗಿ ಸುಖವಾಗಿ ದಡ ಸೇರಿಸಿ ತಂತೆ. ಅಷ್ಟೇಕೆ? ಕರ್ಣಾಟಕ ಸಂಗೀತದಲ್ಲಿ 'ನಾಸಿಕಾಭೂಷಣಿ' ಎಂದೇ ಒಂದು ದಿವ್ಯವಾದ ರಾಗವಿದೆ.

ಹತ್ತು ವರ್ಷದ ಕೃಷ್ಣನಿಗೆ ಮೂರು ಹೊತ್ತೂ ಮೂಗು ತುರಿಸುವುದೇ ಕೆಲಸ—ಅಂದರೆ ಕಾಲು ಕೆರೆದು ಜಗಳಕ್ಕೆ ಹೋಗುವುದು. ಇನ್ನೊಬ್ಬರ ಮೂಗು ಕೊಯ್ಯುವುದು—ಅಂದರೆ ಅವಮಾನ ಮಾಡುವುದು. ಇಷ್ಟಾದರೂ ಘಟಿಂಗ ಎಂದೂ ಮೂಗು ನೆಲಕ್ಕೆ ತಿಕ್ಕುತ್ತಿರಲಿಲ್ಲ—ಸೋಲುತ್ತಿರಲಿಲ್ಲ. ಹೇಗೂ ಮಾಡಿ ಎದುರಾಳಿಯ ಮೂಗು ಕುಯ್ದೇ ಬಿಡುತ್ತಿದ್ದ—ಸೋಲಿಸಿಬಿಡುತ್ತಿದ್ದ.

"ಜಾನಕೀ, ಮಗಳು ಓದು ಮುಗಿಸಿ ಆಯ್ತಲ್ಲಾ. ಯಾವಾಗ ಮೂಗುದಾರ ಹಾಕೋದು ?" ಅಂತ ಗೆಳತಿ ರಮಾ ಕೇಳ್ತಾ ಇದ್ದಳು.

"ಅಯ್ಯೋ ! ಈಗ್ಲೆ ಏನು ಮದುವೆ ಬಿಡಿ. ನಮ್ಮ ಜಲಜಾ ಮಗಳಿಗೆ ಬೇಗ ಮದುವೆ ಮಾಡಿ ಉದ್ಧಾರವಾಯಿತು. ಅತ್ತೇ ಮನೇಲಿ ಮೂಗಿಗೆ ಕವಡೆ ಕಟ್ಟಿ ಕೊಂಡು ದುಡೀತಾ ಇದಾಳಂತೆ" ಅಂತ ಜಾನಕಿ ನಿಟ್ಟುಸಿರಿಟ್ಟಳು.

"ಹೋಗ್ಲಿ ಬಿಡಿ. ಇನ್ನೊಬ್ಬರ ವಿಷಯದಲ್ಲಿ ನಾವ್ಯಾಕೆ ಮೂಗು ತೂರಿ ಸೋದು ? " ಅಂತ ರಮಾ ಸಮ್ಮನಾದಳು.

ಕೆಲವು ಮೂಲ ನಿವಾಸಿಗಳಲ್ಲಿ—ಉದಾಹರಣೆಗೆ ನ್ಯೂಜಿಲ್ಯಾಂಡ್—ಕುಶಲ ಪ್ರಶ್ನೆ ಮಾಡಿಕೊಳ್ಳುವ ರೀತಿಯೇ ವಿಚಿತ್ರ. ಕೈ ಕುಲುಕುವುದಿಲ್ಲ—ನಮ್ಮ ಹಾಗೆ ಕೈ ಜೋಡಿಸುವುದಿಲ್ಲ. ನೋಡಿದ ಕೂಡಲೇ ಓಡಿ ಬಂದು ಪರಸ್ಪರ ಮೂಗಿಗೆ ಮೂಗು ಉಜ್ಜುತ್ತಾರಂತೆ ! ಕೈ ಕುಲುಕುವುದೇ ಬಲು ಕೆಟ್ಟ ಪದ್ಧತಿ—ಒಬ್ಬರ ಕೈಯ ಕ್ರಿಮಿಗಳು ಇನ್ನೊಬ್ಬರಿಗೆ ವರ್ಗಾವಣೆ ಆಗತ್ತೆ. ಭಾರತೀಯರ 'ನಮಸ್ಕಾರ'ವೇ ಉತ್ತಮ ಪದ್ಧತಿ ಎಂದು ಎಲ್ಲಾ ತಜ್ಞರು ಅಭಿಪ್ರಾಯ ಪಟ್ಟಿರುವಾಗ—ಈ ಮೂಗಿಗೆ ಮೂಗುಜ್ಜುವುದು ಇನ್ನೂ ಅಧ್ವಾನ—ಅಲ್ವೆ?

"ಬ್ರೊಮ್ಮನಾ ಸತಿಗೆ ಮೂಗಿಲ್ಲ" ಅಂತಲೇ ಸರ್ವಜ್ಞ ಹೇಳಿಬಿಟ್ಟಿದ್ದಾನೆ ಯಾಕಪ್ಪಾ ಅಂದ್ರೆ ಸಾಹಿತಿಗಳು ಅವಳ ಮೂಗನ್ನು ಮುರಿದು ಬಿಟ್ಟಿದ್ದಾರಂತೆ-ಎಲ್ಲೋ ಓದಿದೆ ಈ ವಿಮರ್ಶೆ. ಪಾಪ, ಸರಸ್ವತಿ!

"ಏನಮ್ಮಾ ಮೂಗಿನ ತುದೀನೇ ನೋಡ್ಕೊಂಡು ಧ್ಯಾನ ಮಾಡ್ತಾ ಇದೀಯೂ? ಏನು ಘಮ ಘಮ ವಾಸನೆ? ಆಹಾ!" ಎಂದು ಘ್ರಾಣೇಂದ್ರಿಯವನ್ನು ಅರಳಿಸಿ ಕೊಂಡು ನನ್ನ ಮಗ ಒಳ ಬಂದ. ಮೂಗಿನ ಬಗ್ಗೆ ನನ್ನ ಧ್ಯಾನ ಭಂಗವಾಯಿತು.



ಶುಭಾಶಯಗಳೊಂದಿಗೆ

**ಸ್ಪೈಸ್ ಕ್ರೀಟ್**

ಪೀಣ್ಯ ಮೂರನೆಯ ಹಂತ, ಪೀಣ್ಯ

ಬೆಂಗಳೂರು-560058

---

ದೂರವಾಣಿ : 608186
609026

**ಓಂಕಾರ್ ಆಫ್ಸೆಟ್ ಪ್ರಿಂಟರ್ಸ್**
**ಅಂಡ್ ಫೋಟೋ ಟೈಪ್ ಸೆಟರ್ಸ್**

33, 1ನೇ ಮುಖ್ಯ ರಸ್ತೆ, ಹೊಸ ತರಗುಪೇಟೆ,
ಬೆಂಗಳೂರು-560002

